ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಸಲಹಾ ಸಮಿತಿ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಟಿ. ಕೆ. ನಂಜುಂಡಪ್ಪ
ಡಾ. ಎಂ.ಎನ್. ಚನ್ನಬಸಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭




॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೬ ಜನವರಿ ೨೦೦೦ ಸಂಚಿಕೆ : ೧

## ಒಳಪುಟಗಳಲ್ಲಿ ......




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

## ಆದರ್ಶದ ಮುಂಬೆಳಕಿನಲ್ಲಿ ಸಾಗೋಣ.....

ಆತ್ಮೀಯರೆ,

ಹೊಸ ಸಹಸ್ರಮಾನ, ನವಶತಮಾನ, ನೂತನ ಕ್ರಿಸ್ತ ಸಂವತ್ಸರ. ಎಲ್ಲೆಲ್ಲೂ ಮಿಲೆನಿಯಂ ಮಿಂಚು. ವೈವಿಧ್ಯಪೂರ್ಣ. ಹರ್ಷ-ಸಂಭ್ರಮಗಳ ಸ್ವಾಗತ. ಸಂತೋಷದಾಳದಲ್ಲಿ ಸಂಕಟದ ನರಳಿಕೆ, ಆತಂಕದ ಕ್ಷಣಗಳು. ಮನಕಲಕುವ ತಹತಹ. ಒರಿಸ್ಸಾದ ಭೀಕರ ಪ್ರಾಕೃತಿಕ ವಿಪ್ಲವದ ಮುಂದೆ ನಡುಗಿದ ನೆನಪು. ವಿಮಾನ ಅಪಹರಣದ ಕರಿನೆರಳಡಿ ವಾರನೂಕಿದ ಭಯದ ನಿಮಿಷಗಳು. ಜಗತ್ತೇ ಭರತಖಂಡದ ಕಡೆಗೆ ಕಣ್ಣಾಡಿಸಿದ ದಿನಗಳು. ಗೀತೆ ಹೇಳಿದಂತೆ "ದುಃಖೇಷು ಅನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಾಃ" - ಎಂಬ ಸ್ಥಿತಿಪ್ರಜ್ಞ ಸ್ಥಿತಿಯಲ್ಲಿ ಸಾಗುತ್ತಿರುವ ಕಾಲಚಕ್ರ, **"ಉರಿ ಬರಲಿ ಸಿರಿ ಬರಲಿ ಬೇಕು ಬೇಡೆನ್ನೆನು"** ಎಂಬ ನಿರ್ಲಿಪ್ತ ಗತಿ. ಈ ಮಧ್ಯೆ ಸಾಗಿರುವ ಪ್ರಜಾಪ್ರಭುತ್ವದ ಆಡಳಿತ ವೈಖರಿ. ಸ್ವಾತಂತ್ರ್ಯ ತಂದುಕೊಟ್ಟ ಮಹಾನುಭಾವರ ಧ್ಯೇಯ, ಆದರ್ಶಗಳನೆಲ್ಲಾ ಗಾಳಿಗೆ ತೂರಿ ಮೋಜು ನಡೆಸುತ್ತಿರುವ ಜನನಾಯಕರ ಇಬ್ಬಂದಿತನ. ವೇದಿಕೆಗಳ ಮಾತಿಗೂ, ಖಾಸಗಿ ಬದುಕಿಗೂ ಸಾಮರಸ್ಯವಿರದ ರೀತಿ ರಿವಾಜು. ಲಜ್ಜೆ, ನಾಚಿಕೆ, ಸಿಗ್ಗುಗಳನ್ನು ಬಳಿಗೆ ಸೇರಿಸದ ಜಾಣಾಕ್ಷತೆ. ಆಧುನಿಕ ವೈಜ್ಞಾನಿಕ ಸೌಲಭ್ಯಗಳನ್ನು ಬಳಸಿಕೊಳ್ಳುವ ತರಾತುರಿಯಲ್ಲಿ ಆಲಸ್ಯ. ಕ್ರಿಯಾಶಕ್ತಿಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಹೃದಯವಂತಿಕೆಯ ಅರಿವಿಲ್ಲದ ಜನಾಂಗ ನಿರ್ಮಾಣದಲ್ಲಿ ನಿರತರಾಗಿರುವ ನಾಯಕರು ನಾಡಿಗಾಗಿ ಏನು ಮಾಡಬಹುದು ಎಂಬ ಚಿಂತೆಯಿಲ್ಲದ ಯುವಜನಾಂಗ. ಅಕ್ಷರದ ಅಹಂಕಾರ ಪ್ರಮತ್ತರಾದ ಈ ಯುವಶಕ್ತಿ ದಿನದಿಂದ ದಿನಕ್ಕೆ ಧಾವಿಸುತ್ತಿರುವ ದುರಂತ ಗಂಭೀರದಿಕ್ಕು. ತಾಯಿ ಸಂಸ್ಕೃತಿ ಪರಂಪರೆಯಿಂದ ವಂಚಿತರಾಗುತ್ತಿರುವ ಎಳೆಯ ಕಂದಮ್ಮಗಳ ಮುಂದಿನ ಶೂನ್ಯ ಜಗತ್ತು. ಭೋಗ ವೈಭವಗಳೇ, ದೈಹಿಕ ಆಕರ್ಷಣೆಗಳೇ ಪರಮೋಚ್ಚ ಆದರ್ಶಗಳೆಂದು ಭಾವಿಸುತ್ತಿರುವ ಯುವ ಮನಸ್ಸುಗಳು ತ್ಯಾಗ, ಸಂಯಮ, ಸರಳ, ಉನ್ನತ ಮೌಲ್ಯಗಳನ್ನು ಪ್ರೀತಿಸುವಂಥ ಜೀವನವಿಧಾನ ಈ ಹೊಸ ಶತಮಾನದಲ್ಲಿ ಪುನರುತ್ಥಾನವಾದೀತೆ? ಅಂಥ ಲಕ್ಷಣಗಳೇನೂ ಕಾಣಬರುತ್ತಿಲ್ಲ. ಉಚಿತ ವಿದ್ಯಾರ್ಥಿನಿಲಯಗಳಲ್ಲಿ, ಮಠ-ಮಂದಿರಗಳಲ್ಲಿ, ಉದಾರ ಮನಸ್ಕರ ನೆರಳಿನಲ್ಲಿ ಆಶ್ರಯ ಪಡೆದು ವ್ಯಾಸಂಗಿಸುತ್ತಿರುವ ಯುವಕರಲ್ಲಿ **"ತಾವು ಊಟ ಮಾಡುತ್ತಿರುವ ಅನ್ನ ಯಾರ ತ್ಯಾಗದ, ಶ್ರಮದ, ದುಡಿಮೆಯ ಫಲ"** ಎಂಬ ಅರಿವೂ ಕಾಣದಂತಹ ದಿನಮಾನಗಳು ಬರುತ್ತಿವೆ ಎಂಬಂತೆ ಭಾಸವಾಗುತ್ತಿದೆ. ಕೃತಜ್ಞತೆ, ಋಣಸ್ಮರಣೆ ಕಾಣದಾಗುತ್ತಿದೆ. "ಎಲ್ಲವೂ ತನಗಾಗಿ ಎಲ್ಲವನ್ನೂ ಅನುಭವಿಸುವ ಹಕ್ಕು ತನಗಿದೆ" ಎಂಬ ಭಾವನೆ, ಪ್ರತಿಯಾಗಿ ತನ್ನ ಕರ್ತವ್ಯವೇನು? ಎಂಬ ಪ್ರಜ್ಞೆಯಿಲ್ಲದ ನಡವಳಿಕೆ. ಶಾಲಾ-ಕಾಲೇಜುಗಳಂತೂ ಗಲಭೆ-ಗದ್ದಲಗಳಿಗೆ, ಮುಷ್ಕರ ದಾಂಧಲೆಗಳಿಗೆ ಫಲವತ್ತಾದ ರಂಗಗಳಾಗುತ್ತಿರುವುದು ಆತಂಕದ, ಅಪಾಯದ ಭವಿಷ್ಯವನ್ನೇ ಸೂಚಿಸುವಂತಾಗಿದೆ. ಮಠ-ಮಾನ್ಯಗಳು ಭೌತಿಕ ಪ್ರಗತಿಯನ್ನೇ ಸಾಧನೆಯೆಂದು ಭಾವಿಸಿರುವಂತಿದೆ. ಆಂತರಿಕ ಬೆಳವಣಿಗೆ, ಶಾಂತಿ ನೆಮ್ಮದಿಯನ್ನು ನೀಡುವ ಮಂಗಳದಾಮಗಳಾಗುವ ಪವಿತ್ರ ವ್ಯವಸ್ಥೆಯನ್ನು ಸಮಾಜ, ಯುವಜನಾಂಗ ಅವುಗಳಿಂದ ನಿರೀಕ್ಷಿಸುವುದು ಸಹಜವಾಗಿದೆ. ಭ್ರಷ್ಟಾಚಾರವಂತೂ ಜೀವನಮಾರ್ಗವಾಗಿರುವ ಸದ್ಯದ ಸ್ಥಿತಿ. ಹೊಸ ಶತಮಾನದ ಉದಯದಂದೇ ಮಗುವನ್ನು ಹೆರಬೇಕೆಂಬ ನವನವೀನ ಮೌಢ್ಯ. ಇಂಥವುಗಳಿಗೆಲ್ಲಾ ಈ ಮಿಲೆನಿಯಂ ಮಣೆ ಹಾಕಬೇಕೆ? **"ನಿಮ್ಮ ನೆನೆದಾಗಲೇ ಉದಯ, ಮರೆದಾಗಲೇ ಮರಣ"** ಎಂಬ ಶರಣರ ವಾಣಿ ಸದಾ ಎಚ್ಚರದ ಘಂಟೆಯಾಗಿ ಮೊಳಗಿದಾಗಲೇ ನವಯುಗದ ಉದಯಕ್ಕೆ ಸಾರ್ಥಕ ಸ್ವಾಗತ ತಾನೆ.

**ಹೊಸ ಶತಮಾನದುದಯಕ್ಕೆ 'ಸಿದ್ಧಗಂಗಾ' 'ಸಕಲ ಜೀವರಿಗೂ ಲೇಸನ್ನು' ಬಯಸುತ್ತದೆ.**

ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಎನ್ನೊಡೆಯ ಎನ್ನರಸ ಎನ್ನ ಭಾಗ್ಯಪದವಿಯೆ
ರನ್ನ ರತುನವೆ ಶ್ರೀ ಶಿವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೊಗ್ಗಲ್ಲಿ ಮಲಗಿರುವೆ ಹೂವಲ್ಲಿ ಅರಳಿರುವೆ
ತಂಗಾಳಿಯಲ್ಲಿ ಸುಳಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತುಂಬಿ ಹರಿಯುವ ತೊರೆಯೆ ನಂಬಿನಡೆದಿಹ ಮಹವೆ
ಗಂಭೀರ ಘನಧೀರ ಲಿಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯೋಗ ಕಾಯಕವೆಂದೆ ಕಾಯಕ ಯೋಗವೆಂದೆ
ಕಾಯ ಕೈಲಾಸವ ನೀಗೈದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇರುಳ ಹಗಲನು ಮಾಡಿ ಹಗಲ ಇರುಳನು ಮಾಡಿ
ದುಡಿದಿರುವೆ ಎಡೆಬಿಡದೆ ಜಗಕಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆದ್ಯರನು ನೆನೆಯುವೆ ಸಾಧ್ಯರನು ಒರೆಯುವೆ
ವೇದವೇದ್ಯರನು ಪರಿಕಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹ ದೇವಾಲಯ ಮಾಡಿತೋರಿಸುತಿರುವ
ದೇವನನೊಳಗಿರಿಸಿ ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನರಮನೆಯೊಳಗೆ ಅರಿವೆ ಗುರುವಾಗಿರುವ
ವರಲಿಂಗ ಜಂಗಮ ಮಹಪರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಂಡೆಮನಗಳ ಹರಸಿ ಮೃದು ಮಯಣ ನೀಗೈದೆ
ಕಲ್ಲಾದಹಲ್ಯೆಯನು ನೆನೆವಂತೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಕ್ಕರಹಂಕಾರ ನುಚ್ಚುನೂರಾಗುವುದು
ಅಕ್ಕರೆಯ ನಿನ್ನ ನುಡಿಯ ಕೇಳಿದರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



### ಶ್ರೀ ವಾಣಿ

## ಗುರುಗಳ ಶ್ರೀರಕ್ಷೆ

ಹಸಿದ ಹೊಟ್ಟೆಗೆ ತತ್ತ್ವೋಪದೇಶ ಸಲ್ಲದು ಎನ್ನುತ್ತಿದ್ದರು ಸ್ವಾಮಿ ವಿವೇಕಾನಂದರು. ಅಂತೆಯೇ ಅದನ್ನು ತಮ್ಮ ಬಾಳಿನುದ್ದಕ್ಕೂ ಆಚರಣೆಯಲ್ಲಿ ತಂದವರು ನಮ್ಮ ಪೂಜ್ಯಗುರುಗಳು - ಶ್ರೀ ಉದ್ದಾನ ಶಿವಯೋಗಿಗಳು, ಶ್ರೀಮಠದ ಇಂದಿನ ಎಲ್ಲ ಬೆಳವಣಿಗೆಯ ಹಿಂದೆ ನಮ್ಮ ಗುರುಗಳ ಶ್ರೀರಕ್ಷೆಯಿದೆ. ನೂರು ಉಪನ್ಯಾಸ, ಪ್ರವಚನ, ಭಾಷಣಗಳಿಗಿಂತ ಹಸಿದು ಬಂದ ಜೀವಕ್ಕೆ ತುತ್ತು ಅನ್ನ ನೀಡುವುದು ಬಹಳ ಶ್ರೇಷ್ಠವೆಂದು ನಂಬಿ ನಡೆದವರು ಪೂಜ್ಯ ಗುರುಗಳು. ಇಂದು, ಅನೇಕ ಅಭಿಮಾನಿಗಳು, ತಜ್ಞರು, ಹಿತೈಷಿಗಳು ಆಗಾಗ ಒಂದು ಸಲಹೆಯನ್ನು ನಮ್ಮ ಮುಂದಿರಿಸುತ್ತಾರೆ. ಶ್ರೀಮಠದ ಮೇಲಿನ ಅಭಿಮಾನ ಅವರು ಹಾಗೆ ಸಲಹೆ ಮಾಡುವಂತೆ ಪ್ರೇರಣೆ ನೀಡುತ್ತದೆ ಎಂಬುದನ್ನು ನಾವು ಭಾವಿಸುತ್ತೇವೆ. ಸಲಹೆ ಏನೆಂದರೆ, ಸಾವಿರಾರು ಜನರಿಗೆ ಆಶ್ರಯ ನೀಡಿ ಶ್ರಮವನ್ನು ಮೇಲೆಳೆದುಕೊಳ್ಳುವುದರ ಬದಲು ಕೆಲವೇ ಕೆಲವಾದರೂ ಮೇಧಾವಿ, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸಹಾಯ, ಸಹಕಾರ ನೀಡುವುದರ ಮೂಲಕ ಮಠದ ಸೇವೆಯನ್ನು ಸಾರ್ಥಕಗೊಳಿಸಬಾರದಲ್ಲವೆ? ಎಂದು. ಅಂದರೆ ಐ.ಎ.ಎಸ್., ಕೆ.ಎ.ಎಸ್. ನಂಥ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳುವ ವಿದ್ಯಾರ್ಥಿಗಳಿಗೆ ಆಶ್ರಯ, ಅನುಗ್ರಹ ಮಾಡುವುದು ಸೂಕ್ತವೆನಿಸುತ್ತದೆ ಎಂಬುದು ಅಭಿಮಾನಿಗಳ ಅಭಿಪ್ರಾಯ. ಸಾಧುವಾದುದೇ ನಿಜ. ಆದರೆ, ಶ್ರೀಮಠದ ಧ್ಯೇಯ, ಪೂಜ್ಯ ಗುರುಗಳ ಆಶಯ ಬೇರೆಯೇ ಇದೆ. ಅಕ್ಷರ ಸಂಸ್ಕೃತಿಯಿಲ್ಲದೆ ಕತ್ತಲಿನ ಗುಡಿಸಲುಗಳಲ್ಲಿ, ಜೋಪಡಿಗಳಲ್ಲಿ, ಶ್ರೀಮಂತರ ಹೊಲ-ಗದ್ದೆಗಳಲ್ಲಿ, ಅಂಗಡಿ ಮುಂಗಟ್ಟೆಗಳಲ್ಲಿ, ಕೂಲಿ ಕಂಬಳ ಮಾಡಿಕೊಂಡು ಜೀವನಯಾಪನೆ ಮಾಡುತ್ತಿರುವ ಅಸಹಾಯಕ ಎಳೆಯ ಮಕ್ಕಳನ್ನು ಅಕ್ಷರದೀಪದ ಬೆಳಕಿನಲ್ಲಿ ಸ್ವಾಭಿಮಾನ, ಸ್ವಾವಲಂಬಿ ಜೀವನ ಮಾಡುವಂತೆ ಅವಕಾಶ ಕಲ್ಪಿಸುವ ನಮ್ರ ಪ್ರಯತ್ನ ಸಂಸ್ಥೆಯದಾಗಿದೆ. ಬಡತನ, ಇಂದು ಸ್ವಾತಂತ್ರ್ಯ ಬಂದು ಐವತ್ತು ವರ್ಷ ಕಳೆದು ಹೋದರೂ ದೇಶವನ್ನು ಕಿತ್ತು ತಿನ್ನುತ್ತಿದೆ. ಮಠದಲ್ಲಿ ಆಶ್ರಯ ಪಡೆದಿರುವ ಅದೆಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಹಾಸಿಗೆ ಬೇಡ ಚಾಪೆ ಕೂಡ ಗತಿಯಿಲ್ಲ. ಹೊದೆಯಲು ಒಂದು ಹಚ್ಚಡ ಅಂದರೆ ಬೆಡ್‌ಷೀಟ್ ಕೂಡಾ ಇಲ್ಲ. ಪುಟ್ಟ ಪುಟ್ಟ ಮಕ್ಕಳು ಒಂದು ಚಿಕ್ಕ ಚಾಪೆಯ ಮೇಲೆ ಇಬ್ಬರು ಮಲಗುತ್ತಾರೆ. ಒಂದೇ ಬೆಡ್‌ಷೀಟನ್ನು ಇಬ್ಬರು ಹೊದೆಯುತ್ತಿರುವ ದೃಶ್ಯ ನೋಡಿದಾಗ ಅತೀವ ನೋವಾಗುತ್ತದೆ. ಒಂದು ಟವೆಲ್ ಕೊಳ್ಳುವುದಕ್ಕೂ ಒದ್ದಾಡುತ್ತವೆ. ಅಂಥ ಮಕ್ಕಳ ಭವಿಷ್ಯದ ಬಗ್ಗೆ ನಮಗೆ, ಸಂಸ್ಥೆಗೆ ಸದಾ ಚಿಂತನೆಯಾಗಿದೆ. ನಮ್ಮ ಪೂಜ್ಯ ಗುರುಗಳು ನಮಗೆ ನೀಡಿದ ಮಂತ್ರ, ಉಪದೇಶ, ನೊಂದವರ ಬದುಕಿನ ಬಗ್ಗೆ ಸದಾ ಸೇವೆಯ ದೀಪ ಹೊಚ್ಚುವುದೇ ಶ್ರೀಮಠದ ಧರ್ಮ ಎಂಬುದನ್ನು "ಸದಾ ಜಾಗರವಿದ್ದು ಬಸದಿಯ ಸಲಹುವ" ದೀಕ್ಷೆಯನ್ನು ಹೊತ್ತು ನಡೆಯುವಲ್ಲಿ ಆನಂದವನ್ನು ಕಾಣುತ್ತೇವೆ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

**ಗೇಣುದ್ದ ಒಡಲೊಳಗೆ ಬೆಟ್ಟದುದ್ದ ಮಾತು ಹುಟ್ಟದ್ದು ನೋಡಾ;**
**ಬೆಟ್ಟದುದ್ದ ಮಾತೆಲ್ಲಾ ಏತಕಯ್ಯಾ ಎಂದರೆ - ಗೇಣುದ್ದ ಒಡಲ ಹೂಣುವುದಕ್ಕಾಗಿ ಕಾಣಾ.**
**ವಾಚಾಳಕತ್ವದಿಂದ ಉದರವ ಹೊರೆವವರೆಲ್ಲಾ ಗುರುವೆ?**
**ಇಂದ್ರಿಯಂಗಳಿಗೊಂದು ಮಾತು ಕಲಿತು**
**ಸದಾಶಿವನ ಸಂಧಿಸಿ ಸರ್ವರಿಗೆ ತೋರಿಹೆನೆಂಬರು; ತಾವೇಕೆ ಕಾಣರೋ?**
**ತಾವು ಕಾಣದೆ ತಮ್ಮಲ್ಲಿ ವಸ್ತು ವಿವೇಕವಿಲ್ಲದೆ**
**ಅನ್ಯರಿಗೆ ಹೇಳುವ ಬೋಧೆ ಅದು ಅವಿಚಾರ ಕಾಣಾ.**
**ಗುರುತ್ವವ ಬಲ್ಲ ಗುರು ಶುದ್ಧ ಚಿದ್ರೂಪನು, ಚಿನ್ಮಯನು ನೋಡಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !**

ಅಜ್ಞಾನಿಗಳು ತಮ್ಮ ಸಣ್ಣದಾದ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿ ಬೆಟ್ಟದೆತ್ತರದ ಮಾತುಗಳನ್ನು ಬಳಸುತ್ತಿರುವರು. ಕೇವಲ ಮಾತುಗಾರಿಕೆಯಿಂದ ಗುರುತ್ವ ಸಿದ್ಧಿಸದು. ಎಲ್ಲರಿಗೂ ಶಿವತತ್ತ್ವವನ್ನು ಬೋಧಿಸಲು ಮುಂದೆ ಬಂದವರು ತಾವೆಷ್ಟು - ಶಿವಾನುಭವಿಗಳಾಗಿದ್ದೇವೆಂಬುದನ್ನು ತಿಳಿದು ನೋಡಬೇಕು. ತಾವೇ ಅನುಭವಿಸದಿದ್ದುದನ್ನು ಅನ್ಯರಿಗೆ ಬೋಧಿಸುವುದಕ್ಕಿಂತ ಅಜ್ಞಾನ ಮತ್ತೊಂದಿಲ್ಲ. ನಿಜವನ್ನು ಬಲ್ಲ ಗುರುವು ವಾಚಾಳನಾಗನು. ಅವನು ಕೇವಲ ಚಿದ್ರೂಪನೇ ಆಗಿ ಬೆಳಗುವನು. ಗುರುಗಳನ್ನು ಗುರುತಿಸುವುದನ್ನು ತಿಳಿಯದೇ ಹೋದರೆ ಬಹಳ ಅನರ್ಥಗಳನ್ನು ಅನುಭವಿಸಬೇಕಾಗುವುದು.

(**ಕೃಪೆ** : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಸಂಕ್ರಾಂತಿ

ನಿಂತನೀರಲ್ಲ ಜೀವನ
ನಿರಂತರ ಹೋರಾಟಯಾನ
ಉರುಳುತಿದೆ ಕಾಲಮಾನ
ಶಾಂತಿದೀಕ್ಷೆಯ ತೊಡು ಜೀವನ - ಸಂಜೀವನ

ಜೀವನದ ಉತ್ಕರ್ಷಕೆ ಸಂಕ್ರಾಂತಿ ಬುನಾದಿ
ಸಂಕ್ರಮಣ ಪರ್ವಕಾಲದಿ ನೀನಾಗುಪ್ರವಾದಿ
ವಿವಾದಿ ಎಂದೆನಿಸದೆ ಆಗು ಸಕಲ ಗುಣನಿಧಿ
ಅರಿಷಡ್ವರ್ಗಗಳ ನೀ ಮೆಟ್ಟಿ ನಿಂತರದೇ ಸುಗಮ ಹಾದಿ

ದಾನ ಧರ್ಮನೀಡಿ ಪಿತೃಋಣ ಕಳೆವ ಕಾಲ
ಎಳ್ಳುಬೆಲ್ಲ ಮೆಲ್ಲಿ ಚೆನ್ನುಡಿ ನುಡಿವ ಕಾಲ
ಸ್ವರ್ಗ ದ್ವಾರ ತೆರೆವ ಮಹಾಪ್ರಸ್ಥಾನ ಕಾಲ
ಮಾನವ, ಸಮನ್ವಯ ಮೌಲ್ಯಗಳ ಅರಿವ ಕಾಲ

ಕೃಷಿಕರ ಬೆನ್ನೆಲುಬು ಗೋವು, ಎತ್ತು ಕುರಿಮಂದೆ
ಗೌಸು, ಗಗ್ಗರ ತೊಡಿಸಿ ಪೂಜಿಪರು ಸಂಕ್ರಾಂತಿಯಂದೆ
ಎಡೆಮಾಡಿ ಪೊಂಗಲ್ ಬೇಡುವರು ಸಂಪತ್ಕರ್ತ ನೀನೆಂದೆ
ಬಸವನಾ ಪಾದಕ್ಕೆ ಪೊಡಮಡುವರಿಂದೆ

ಮಕರ ರಾಶಿಯೊಳ್ಸೇರೆವ ದಿವಾಕರ ಸಂತಸದಿ
ಸೌರವ್ಯೂಹದಲ್ಲಿ ಸಾಗುವನು ಉತ್ತರಾಯಣ ಪಥದಿ
ಹೊಸರಥವನೇರ್ವರಥಸಪ್ತಮಿಯ ಶುಭದಿನದಿ
ಕಲಿಸುವನು ಜೀವನ ಪರಿಕ್ರಮಣ ಅನುಪಮದಿ

ಭಾಸ್ಕರನು ರಥವೇರಿ ನಗುತಿಹನು ಬಾನಲ್ಲಿ
ಧಾನ್ಯಲಕ್ಷ್ಮಿಯು ನಲಿವಳು ಕರ್ಮಯೋಗಿಗಳ ಮನೆಯಲ್ಲಿ
ಸುಗ್ಗಿಯ ಸಂಭ್ರಮದಿ ಸಗ್ಗ ಇಳಿದಿಹುದಿಲ್ಲಿ
ಆದಿತ್ಯ ಕರುಣಿಸಲಿ ಸುಖಶಾಂತಿ ಬಾಳಲ್ಲಿ

**- ಹುಲಿಕಲ್ ನಾಗರಾಜ**





# ಬೆಳಗಿನೊಳಗಣ ಮಹಾಬೆಳಗು

# ಶ್ರೀ ಉದ್ದಾನಶಿವಯೋಗಿಗಳು

**- ಹೆಚ್.ವಿ. ವೀರಭದ್ರಯ್ಯ**

ದಿನಾಂಕ ೧೫.೧.೨೦೦೦ದಂದು ಶ್ರೀಮಠ ಸಿದ್ಧಗಂಗಾದಲ್ಲಿ ಶ್ರೀ ಉದ್ದಾನಸ್ವಾಮಿಗಳ ಐವತ್ತೊಂಬತ್ತನೇ ಪುಣ್ಯಾರಾಧನೆ. ಶ್ರೀಗಳವರು ಲಿಂಗೈಕ್ಯರಾದದ್ದು ೧೧.೧.೧೯೪೧ರಂದು. ಪೂಜ್ಯರು ಬಯಲಾಗಿ ಐವತ್ತೆಂಟು ವರ್ಷಗಳು ಉರುಳಿವೆ. ಶ್ರೀಮಠ ಅಭೂತಪೂರ್ವವಾಗಿ ಅವರು ತೋರಿದ ಗುರುಪಥದಲ್ಲಿ ಮುನ್ನಡೆದಿದೆ. ಸುಖ-ದುಃಖದಲ್ಲಿ ಆ ಮಹಾತ್ಮರನ್ನು ಸ್ಮರಿಸುತ್ತಲೇ ಸಂಸ್ಥೆಯ ಯಾವೊಂದು ಸೇವಾ ಕಾರ್ಯಗಳೂ ಮುನ್ನಡೆದಿವೆ ನಾಡಿನ ಭಾಗ್ಯ, ಸಮಾಜದ ಪುಣ್ಯವೆಂಬಂತೆ.

ಶ್ರೀ ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪನೆಂದು. ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕು ಲಕ್ಕೂರು ಪುಣ್ಯಗ್ರಾಮ ರುದ್ರಪ್ಪನವರಿಗೆ ಜನ್ಮಕೊಟ್ಟ ಸ್ಥಳ. ೧೮೬೦ರಲ್ಲಿ ಪಟೇಲ್ ಗಟ್ಟೆಪ್ಪ ಮತ್ತು ಮರುಳಸಿದ್ಧಮ್ಮನವರ ಶಿವಲಿಂಗಪುಷ್ಪವಾಗಿ ಅರಳಿದ ಮಗು ರುದ್ರಪ್ಪ. ಐದು ಜನ ಅಣ್ಣಂದಿರು, ನಾಲ್ಕು ಜನ ಸೋದರಿಯರ ತುಂಬು ಕುಟುಂಬದಲ್ಲಿ ಕಣ್ಣರಳಿಸಿದ ಪುಣ್ಯದ ಮೊಗ್ಗು. ದಾಸೋಹಕ್ಕೆ ಹೆಸರಾದ ಮನೆತನ. ಗುರು-ಲಿಂಗ-ಜಂಗಮ ಭಕ್ತಿಯ ಬೀಡು. ರುದ್ರಪ್ಪ ಬೆಳೆದಂತೆ ಸಿರಿಸಂಪತ್ತು ಹೆಚ್ಚುತ್ತ ಬಂದಿತು. ಕಾಯಕದ ಕಾರುಣ್ಯ ಕಂದನಾಗಿ ಕುರಿ-ಮೇಕೆಗಳ ಆರೈಕೆಯಲ್ಲಿ ಅರಳುತ್ತ ರುದ್ರಪ್ಪ ಸಿದ್ದನ 'ಬೆಟ್ಟದ ಜೀವ'ವಾಗಿ ಬೆಳೆದದ್ದು ಭವಿಷ್ಯದ ಬದುಕಿಗೆ ಬಾಗಿಲು ತೆಗೆಯುವಂತಾಯಿತು. ರುದ್ರಪ್ಪ ಓದಿದ್ದು ಕಡಿಮೆ. ಅರಿತದ್ದು ಜಾಸ್ತಿ. ದೊಡ್ಡ ದರ್ಶನವನ್ನು ತನ್ನ ಭವ್ಯತನುವಿನಲ್ಲಿಟ್ಟುಕೊಂಡೇ ಹುಟ್ಟಿಬಂದಿದ್ದ ರುದ್ರಪ್ಪ ಯೋಗಿಗಳ, ಸಿದ್ಧರ ಸಾನಿಧ್ಯದಲ್ಲಿ ಸಿದ್ದನಬೆಟ್ಟದ ಅಂತರಂಗದಾವರಣದಲ್ಲಿ ಬೆಳೆಯುತ್ತ ಬಂದ. ಜೀವನದಲ್ಲಿ ಅದೂ ಮಹಾತ್ಮರ ಜೀವನದಲ್ಲಿ ಮಹಾತಿರುವುಗಳು ಉಂಟಾಗುತ್ತವೆ. ಅಂತೆಯೇ ರುದ್ರಪ್ಪನ ಜೀವನದಲ್ಲಿಯೂ ಉಂಟಾದ ತಿರುವು ಲೋಕಕಲ್ಯಾಣಕ್ಕೆ ತೆರೆದ ಮುತ್ತಿನ ಬಾಗಿಲಾಯಿತು. ಸಾಧಕನ ಹಾದಿಯಲ್ಲಿ ಕಂಡುಬಂದ ಸಾಧನೆಯ ಸೋಪಾನವೆನಿಸಿತು. ತನ್ನ ಮನೆಯ ಮೇಕೆಯೊಂದನ್ನು ಮಾರಿದ್ದಕ್ಕಾಗಿ ಮನೆಯವರ ಕೋಪಕ್ಕೆ ಕಾರಣವಾಗಿ, ಮನೆಬಿಟ್ಟು ಸಿದ್ಧಗಂಗೆಗೆ ಬಂದ ರುದ್ರಪ್ಪ ಅಲ್ಲಿನ ಸೇವಾಮೂರ್ತಿಯಾದ ಪರಮ ತಪಸ್ವಿ ಶ್ರೀ ಅಟವೀಸ್ವಾಮಿಗಳ ಯೌಗಿಕ ಕಣ್ಣಿಗೆ ತಂಪುತಂದ ತೇಜಸ್ವಿ ತರುಣ ತರಣಿಯಾದ. ನಿಧಿ ನಿಧಾನವ ಕಂಡಷ್ಟು ಅಟವೀಸ್ವಾಮಿಗಳಿಗೆ ಆನಂದವಾಯಿತು. ಅನಿಮಿಷ - ಅಲ್ಲಮಪ್ರಭುಗಳಂತೆ, ರಾಮಕೃಷ್ಣ-ವಿವೇಕಾನಂದರಂತೆ, ಗುರು-ಶಿಷ್ಯರ ಸಂಗಮವಾಯಿತು.

ಗುರು ಕಾರುಣ್ಯದಂಗಳದಲ್ಲಿ ರುದ್ರಪ್ಪ ಶ್ರೀ ಉದ್ದಾನಸ್ವಾಮಿಯಾಗಿ ಬೆಳೆದ. ಗುರುವೇ ಹುಬ್ಬೇರಿಸುವಂತೆ, ನಿಬ್ಬೆರಗಾಗುವಂತೆ, ಇಹ-ಪರಗಳೆರಡನ್ನೂ ಗೆಲ್ಲುವ ಮಹಾಮಹಿಮನಾಗಿ ಬೆಳೆದ. ಕಾಯಕ-ದಾಸೋಹಗಳ ರಹಸ್ಯವನ್ನು ಅರಿತು ಅಡಿಯಿರಿಸದ. ಸಿದ್ಧಗಂಗೆಗೆ ಸಹಸ್ರತೋಳಬಲತಂದ ಭೀಮಸಾಹಸಿಯೆನಿಸಿದ. ಶ್ರೀಮಠದ ದಾಸೋಹದಲ್ಲಿ ಕರಗಿ ಕನಕನಾದ. ಪ್ರಾಂತದರ್ಶಿಯಾಗಿ ಬೆಳೆದುನಿಂದ. ಲೋಕದ ಕಣ್ಣಿನಲ್ಲಿ ಪವಾಡ ಪುರುಷನಾಗಿ ಕಂಗೊಳಿಸಿದ. ಶ್ರೀಕ್ಷೇತ್ರಕ್ಕೆ ತನ್ನ ದಣಿವರಿಯದ ದುಡಿಮೆಯಿಂದ ಹೊಸ ಆಯಾಮವನ್ನೇ ನಿರ್ಮಾಣ ಮಾಡಿದ ನಿರಂಜನ ಪ್ರಭೆಯಾದ. ಅಟವೀಸ್ವಾಮಿಗಳು ತಾವು ಕನಸಿದ ಲೋಕೋಪಕಾರಕ ಕಲ್ಯಾಣ ಕಾರ್ಯಗಳೆಲ್ಲ ನಿರ್ಬಾಧಿತವಾಗಿ ಮುಂದುವರಿಸಿಕೊಂಡು ಹೋಗುವ ಸಾಮರ್ಥ್ಯವನ್ನು ಉದ್ದಾನಪ್ಪನವರಲ್ಲಿ ಕಂಡರು. ಅವರನ್ನೇ ಶ್ರೀಮಠದ ಮುಂದಿನ ಕ್ಷೇತ್ರಾಧಿಪತಿಗಳೆಂದು ತೀರ್ಮಾನಿಸಿ **'ಉದ್ದಾನಶಿವಯೋಗಿ'** ಎಂಬ ನೂತನ ಅಭಿದಾನದಿಂದ ನೇಮಿಸಿ ಅಧಿಕಾರ ವಹಿಸಿಕೊಟ್ಟರು.

ಅದೊಂದು ಪುಣ್ಯದ ಘಳಿಗೆ. ಕಾಲ-ದೇಶಗಳು ಮಾಡಿದ ತಪಸ್ಸಿನ ಫಲ. ಶ್ರೀಮಠದ ಶ್ರೇಯೋಭಿವೃದ್ಧಿಗೆ ಕಾರಣಪುರುಷನ ಆಗಮನವಾದ ಅಮೃತ ಮುಹೂರ್ತ. ಗುರು ಅನುಗ್ರಹಿಸಿ ಶಿಷ್ಯನ ವ್ಯಕ್ತಿತ್ವ ವಿಕಾಸದ ಭವ್ಯದಿವ್ಯದಲ್ಲಿ ತನ್ನನ್ನು ಕಂಡುಕೊಂಡು ಧನ್ಯವಾಯಿತು. ಅಟವೀಸ್ವಾಮಿಗಳು ಚಿಕ್ಕತೊಟ್ಲು ಕೆರೆಯಲ್ಲಿ ನಿಜಗದ್ದುಗೆಯಲ್ಲಿ ಯೋಗನಿದ್ರೆಯಲ್ಲಿ ನಿರತರಾದರು. ೧೯೦೧ರಲ್ಲಿ ಶ್ರೀ ಉದ್ದಾನಸ್ವಾಮಿಗಳು ಶ್ರೀಮಠಸಿದ್ಧಗಂಗೆಯಲ್ಲಿ ಗುರುಗಳ ಸ್ಮರಣೆಯಲ್ಲಿ ಮುಂದುವರಿದರು. ತಮ್ಮ ಗುರು ಅಟವೀಸ್ವಾಮಿಗಳ ಗದ್ದುಗೆಯನ್ನು ಮಠದಲ್ಲಿ ಕಟ್ಟಿಸಿದರು.

ಪ್ರಬಲ ಸಂಕಲ್ಪ ಶಕ್ತಿಯ ಶ್ರೀ ಉದ್ದಾನಸ್ವಾಮಿಗಳು ಮಠದ ಸೇವಾಕಾರ್ಯಗಳನ್ನು ವಿಸ್ತರಿಸುತ್ತ ಬಂದರು. ಜೋಳಿಗೆಯ ಶುದ್ಧಕಾಯಕ ಮುಂದುವರಿಸಿದರು. ತಾವು ಓದಿದ್ದು ಕಡಿಮೆಯಾದರೂ, ಲೋಕವನ್ನು ಓದಲು ಶ್ರೀಗಳು ವಹಿಸಿದ ಮುತುವರ್ಜಿ ಅಪಾರ. ಸಂಸ್ಕೃತಾಭ್ಯಾಸ ಕೇವಲ ಒಂದು ವರ್ಗಕ್ಕೆ ಸೀಮಿತವಾಗಿದ್ದ ದಿನಮಾನಗಳಲ್ಲಿ ದಿಟ್ಟವಾಗಿ ಎಲ್ಲರೂ ಸಂಸ್ಕೃತ ಕಲಿಯುವಂತೆ ೧೯೧೭ರಲ್ಲಿಯೇ ಪಾಠಶಾಲೆ ತೆರೆದರು. ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯನ್ನು ೧೯೦೯ರಷ್ಟು ಹಿಂದೆಯೇ ಪ್ರಾರಂಭಿಸಿದರು. ಜಾತ್ರಾರ್ಥಿಗಳಿಗೆಲ್ಲಾ ದಾಸೋಹ ಪ್ರಾರಂಭಿಸಿದರು. ಶ್ರೀಮಠವನ್ನು ದೊಡ್ಡ ನ್ಯಾಯಾಲಯವನ್ನಾಗಿ ಕಟ್ಟಿ ಬೆಳೆಸಿದರು. 'ಮಠವೆಂಬುದು ಘಟದಿಂದ' ಎಂಬುದನ್ನು ಪ್ರತ್ಯಕ್ಷ ಮಾಡಿ ತೋರಿಸುತ್ತ ನಡೆದರು. ನವರಾತ್ರಿ ಉತ್ಸವ ಪ್ರಾರಂಭಿಸಿದರು. ವಿದ್ಯಾರ್ಥಿನಿಲಯ ತೆರೆದರು ಜಾತಿ-ಮತ-ಕೋಮುಗಳನ್ನು ನೋಡಲಿಲ್ಲ. ಜ್ಞಾನದಾಹಿಯಾಗಿ ಬಂದ ಮನಸ್ಸನ್ನು ಮಾತ್ರ ಪುರಸ್ಕರಿಸಿದರು.

ಶ್ರೀ ಉದ್ದಾನಶಿವಯೋಗಿಗಳು **'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ'** ಕಾಯಕ ಸದ್ಭಾವಿಗಳು. ಶಿವಯೋಗ ಸಾಧನೆಯ ಶಿವಕಳಸವಾದವರು. ತಮ್ಮ ಉತ್ತರಾಧಿಕಾರಿಯನ್ನಾಗಿ "**ಮರುಳಾರಾಧ್ಯ**"ರನ್ನು ಆಯ್ಕೆ ಮಾಡಿಕೊಂಡರು. ಶಿವನಿಚ್ಛೆ ಬೇರೆ ಇತ್ತೆಂದು ಕಾಣುತ್ತದೆ. ಅವರು ಅಲ್ಪ ಕಾಲದಲ್ಲಿಯೇ ಶಿವನೊಳೊಂದಾದರು. ಪೂಜ್ಯ ಮರುಳಾರಾಧ್ಯರ ಸ್ನೇಹ ಸೌಭಾಗ್ಯವಾಗಿದ್ದ "ಶಿವಣ್ಣ"ನವರು ಸಿದ್ಧಗಂಗೆಯ ಸಾಣೆ ಶ್ರೀಗಂಧಕ್ಕೆ ಬರುವ ಶುಭಘಳಿಗೆ ಕಾದಿತ್ತು. ಶ್ರೀ ಉದ್ದಾನಶಿವಯೋಗಿಗಳು ಶಿವಣ್ಣನವರನ್ನು ಶ್ರೀಮಠದ ಉತ್ತರಾಧಿಕಾರಿಗಳನ್ನಾಗಿ ದಿನಾಂಕ ೩.೩.೧೯೩೦ರಂದು "**ಶ್ರೀ ಶಿವಕುಮಾರಸ್ವಾಮಿ**"ಗಳೆಂದು ಅಭಿದಾನವಿತ್ತು ಆಶ್ರಯ ನೀಡಿ ಸಂಸ್ಥೆಯ ಸೇವಾವ್ರತವನ್ನು ಆಶೀರ್ವದಿಸಿದರು. ಅಂದಿನಿಂದ ಸುಮಾರು ಹನ್ನೊಂದು ವರ್ಷ ಗುರುಶಿಶುವನ್ನು ಎಚ್ಚರದ ಕಣ್ಣಿನಲ್ಲಿ ಆರೈಕೆ ಮಾಡಿ ೧೧.೧.೧೯೪೧ರಂದು ಲಿಂಗದೊಳಗಾಗುವ ಮುನ್ನ ಶಿಷ್ಯಮಂಗಳವನ್ನು ಸಂಪೂರ್ಣ ದೃಷ್ಟಿಯಿಟ್ಟು ಹರಸಿ ಲಿಂಗದೊಳಗಾದರು. ಬೆಳಗಿನೊಳಗಣ ಮಹಾಬೆಳಗಾಗಿ ಹೋದರು. ಲೋಕಕ್ಕೆ, ಸಮಾಜಕ್ಕೆ ಮಹಾನಿಧಿಯನ್ನು ಕೊಟ್ಟುಹೋದರು. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥ ಅದ್ಭುತ ಚೇತನವನ್ನು, ಸೇವಾಜ್ಯೋತಿಯನ್ನು ಮುಡಿಸಿದರು.

ಆ ಪರಮಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳ ಪುಣ್ಯ ಸ್ಮರಣೆಗಾಗಿ ಈ ಕಿರು ಲೇಖನ ಕಾಣಿಕೆ.

(ಕೃಪೆ : 'ಸಿದ್ಧಗಂಗಾಶ್ರೀ ಅಭಿನಂದನ ಗ್ರಂಥ')

## ಶ್ರೀ ಉದ್ದಾನಶಿವಯೋಗಿಗಳು

ಶ್ರೀಮತ್ಸಚ್ಛಿನಯೋಗಭೋಗನಿರಂತಚಿಚ್ಛಕ್ತಿಪತ್ವಾತ್ಮಕಂ।
ಶ್ರೀಮದ್ವಿಶ್ವಕುಟುಂಬಿಯಾಗಿ ಜಗಮಂರಕ್ಷಿಪ್ಪಯೋಗೀಶ್ವರಂ॥
ಶ್ರೀಮನ್ನಿರ್ಮಲ ಸತ್ವತತ್ವಸದನಂಶ್ರೀಮನ್ಮಹಾಮದ್ಗುರುಂ
ಶ್ರೀಮದ್ಭಕ್ತರಕಾಯ್ದುದ್ಧೈ ಕರುಣದಿಂದುದ್ದಾನಯೋಗೀಶ್ವರಂ ॥೧॥

ಅಟವೀಶನ ವರಪುತ್ರಂ।
ಪಟುತರ ಹೃದಯಾತ್ಮರಾಗಭೋಗ ವಿದೂರಂ॥
ನಿಟಿಲಾಕ್ಷನ ಸಚ್ಛೇವ್ಯಂ।
ಕುಟಿಲವಿವರ್ಜಿತನು ಪೊರೆವುದುದ್ದಾನೇಶಂ ॥ ೨ ॥

ಕಲ್ಯಾಣಮೂರ್ತಿಮಹಿಮಂ
ಕಲ್ಯಾಣಗುಣಾಂಕ ಶೋಭನಾಕಾರ ಗುರುಂ॥
ಕಲ್ಯಾಣಕಾರ್ಯ ಕರ್ತ್ಯಂ
ಕಲ್ಯಾಣಂಬೆತ್ತು ಪೊರೆವುದುದ್ದಾನೇಶಾ ॥ ೩ ॥

ಸತ್ಯದ ನೆಲೆವೀಡಮರರ
ನಿತ್ಯದ ಜೋಡಿಕೆ ಪರೋಪಕಾರದ ಬೀಡೈ॥
ಭೃತ್ಯರ ಸಾಕ್ಷಾತ್ಕಾರಂ
ಮೃತ್ಯುಂಜಯ ರೂಪ ರಕ್ಷಿಸುದ್ದಾನೇಶಾ ॥ ೪ ॥

ಕರುಣಸುಧಾರಸಪೂರ್ಣಂ।
ಶರಣರ ಮನದನುಪಮ ಸುಖಧಾರಾಗಾರಂ॥
ನಿರಪೇಕ್ಷಭಕ್ತಹೃತ್ಸಂ
ಚಾರಂ ಕರವಿಡಿದು ಪೊರೆವುದುದ್ದಾನೇಶಾ ॥ ೫ ॥

ಸದ್ಧರ್ಮವೆ ನಿನಗೆ ಕುಲಂ ।
ಸದ್ಬೋಧಾಕಾರ್ಯ ಮದುವೆ ನಿನ್ನಯ ಶೀಲಂ
ಸಿದ್ಧರಸಂಗದೊಳಾಡುವ।
ಶುದ್ಧನಮದಸೋಂತ ಲೆಂಕದುದ್ದಾನೇಶಾ ॥ ೬ ॥

ಕಲಿಯೊಳ್ ಕಾಲನ ಜಾಲದೋಳ್ ಸಿಲುಕಿ
ಸದ್ಧರ್ಮಗಳಂ ನೀತಾತುಂ।
ನೆಲದೊಳ್ ಕರ್ಮವ ನಿತ್ಯಗೈದು ಮನುಜರಾ
ಕಂಗೆಟ್ಟುತಾಂಪೋಪರೆಂ॥
ದೊಲವಿಂದಂ ಗುರುವಾಗಿ ಬಂದ ಹರನೀಂ ಕಾರುಣ್ಯದಿಂ ರಕ್ಷಿಸೈ।
ನೆಲಸಿರ್ಪಾತನೆ ಸಿದ್ಧಗಂಗೆಯೊಳಗಂ ಉದ್ದಾನ ಯೋಗೀಶ್ವರಾ
॥ ೭ ॥

- ಎಂ. ನಂಜುಂಡಯ್ಯ





# ತವನಿಧಿ : ದೇವರ ದಾಸಿಮಯ್ಯ

- ಪ್ರೊ॥ ಡಿ.ಟಿ. ರಂಗಸ್ವಾಮಿ
ಕನ್ನಡ ನಿವೃತ್ತ ಪ್ರಾಧ್ಯಾಪಕರು,
ವಿ.ಪಿ. ಬಡಾವಣೆ, ಚಿತ್ರದುರ್ಗ

'ಮಹಾತ್ಮರಂ ನೆನೆವುದೆ ಘನ ತಪಂ' ಎಂದಿದ್ದಾನೆ ವಚನಕಾರ ಮೊಗ್ಗೆಯ ಮಾಯಿದೇವ. ಮಹಾತ್ಮರ ಪುಣ್ಯಸ್ಮರಣೆ, ಮಹಾತ್ಮರ ಧರ್ಮೋಪದೇಶ, ಆದರ್ಶ ಗುಣಗಳು - ನಮ್ಮೆಲ್ಲರ ಬದುಕಿಗೆ ಅನಿವಾರ್ಯವಾಗಿವೆ. ಭಕ್ತಿ, ನೀತಿ, ಧರ್ಮ ಮುಂತಾದ ಮೌಲ್ಯಗಳು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿರಲು ಈ ಮಹಾತ್ಮರ ಮಹಾನುಭಾವರ ಪುಣ್ಯಸ್ಮರಣೆಗಳು ಅತ್ಯಗತ್ಯ.

ನಮ್ಮ ನಾಡಿನ ಕನ್ನಡ ಸಾಹಿತ್ಯದಲ್ಲಿ ವಚನ-ಸಾಹಿತ್ಯ ಒಂದು ಅಪೂರ್ವವಾದ ಅಕ್ಷಯನಿಧಿಯಾಗಿದೆ. ಸಾಹಿತ್ಯ ಉದ್ಯಾನವನದಲ್ಲಿ ಇದು ತಪೋವನದಂತಿದೆ. ಹನ್ನೊಂದು-ಹನ್ನೆರಡನೆಯ ಶತಮಾನದಲ್ಲಿ ಈ ವಚನ ಸಾಹಿತ್ಯವೆಂಬ ವಿಶಿಷ್ಟ ಸಾಹಿತ್ಯ ಪ್ರಕಾರವು ಅಂದಿನ ಶರಣ-ಶರಣೆಯ ಅನುಭಾವದಿಂದ ಮೂಡಿಬಂದ ಮಹಾಬೆಳಗು. ಲೋಕದ ಕತ್ತಲೆಯನ್ನು ಪರಿಹರಿಪ ಬೆಳಗು; ಕಾಯದ ಕಳವಳ, ಮಾಯದ ಮದ, ಜೀವದ ಜಂಜಡವನ್ನು ಪರಿಹರಿಸಿ ಶಿವಾನುಭೂತಿಯನ್ನುಂಟು ಮಾಡುವ ಧರ್ಮೋಪದೇಶದ ಮಹಾಬೆಳಗು.

ವಚನಗಳು ಕನ್ನಡ ಸಾಹಿತ್ಯದ ಉಪನಿಷತ್ತುಗಳು. ವಿಶ್ವಸಾಹಿತ್ಯದಲ್ಲಿಯೇ ಇವುಗಳಿಗೆ ವಿಶಿಷ್ಟ ಸ್ಥಾನವಿದೆ. ಇವುಗಳನ್ನು ಹಾಡಿದವರು ಕನ್ನಡದ ರಸಋಷಿಗಳೂ, ವಚನಕಾರರೂ, ಶಿವಾನುಭವಿಗಳೂ ಆದ ಶರಣ-ಶರಣೆಯರು. ಇವರಲ್ಲಿ ದೇವರ ದಾಸಿಮಯ್ಯ ಮೂಲಪುರುಷನಾಗಿದ್ದಾನೆ.

ವಚನಗಳು ಆಧ್ಯಾತ್ಮಿಕ ಭಾವಗೀತೆಗಳೂ ಆಗಿವೆ. ಕಾವ್ಯರೂಪದಲ್ಲಿಲ್ಲದಿದ್ದರೂ ಕಾವ್ಯಾಂಶವನ್ನೊಳಗೊಂಡ ಬೆಳಕಿನ ನುಡಿಕಿರಣಗಳಾಗಿವೆ. ಭವದ ಪೀಡೆಯನ್ನು ಪರಿಹರಿಸಿ ಶಿವಪಥವನ್ನು ತೋರುವ ಮಾರ್ಗದರ್ಶಿ ಸೂತ್ರಗಳಾಗಿವೆ. ವಿಶ್ವದ ಎಲ್ಲ ದೇಶ, ಬಣ, ಜನಾಂಗಗಳವರೂ ಇವುಗಳಿಂದ ಮಾರ್ಗದರ್ಶನ ಪಡೆಯಬಹುದಾಗಿದೆ.

೧೨ನೆಯ ಶತಮಾನದ ಸುಪ್ರಸಿದ್ಧ ಧರ್ಮಗುರುಗಳಾದ ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ ಮೊದಲಾದ ನೂರಾರು ಶರಣರಿಗಿಂತ ಮುಂಚಿತವಾಗಿ ೧೧ನೆಯ ಶತಮಾನದಲ್ಲಿ ಇದೇ ವಚನಸಾಹಿತ್ಯ ಪರಂಪರೆಯಲ್ಲಿ ಮೊಟ್ಟ ಮೊದಲನೆಯದಾಗಿ ಪ್ರಸಿದ್ಧಿ ಪಡೆದಿದ್ದ ಮಹಾನುಭಾವನೇ ದೇವರ ದಾಸಿಮಯ್ಯ. ಈತ ಪ್ರಸಿದ್ಧರಾದ ಶಿವಶರಣರಲ್ಲಿಯೇ ಅಗ್ರಗಣ್ಯನಾಗಿದ್ದಾನೆ. ಬಸವಣ್ಣನವರೂ ಈತನನ್ನು ವಿಶೇಷವಾಗಿ ಕೊಂಡಾಡಿರುವುದುಂಟು. ಮಹಾನುಭಾವ ಬಸವಣ್ಣನವರಿಗೇ ಈತನು ಆದರ್ಶನಾಗಿದ್ದನೆಂದ ಬಳಿಕ ಈತನ ಘನತೆ, ಗೌರವಗಳನ್ನು ಗಮನಾರ್ಹವಾಗಿ ಪರಿಶೀಲಿಸಬಹುದಾಗಿದೆ.

**"ಭಕ್ತಿಯಿಲ್ಲದ ಬಡವ ನಾನಯ್ಯಾ
ಕಕ್ಕಯ್ಯನ ಮನೆಯಲು ಬೇಡಿದೆ
ಚೆನ್ನಯ್ಯನ ಮನೆಯಲು ಬೇಡಿದೆ
ದಾಸಯ್ಯನ ಮನೆಯಲು ಬೇಡಿದೆ
ಎಲ್ಲ ಪುರಾತನರು ನೆರೆದು ಭಕ್ತಿಭಿಕ್ಷವನಿಕ್ಕಿದರೆ
ಎನ್ನ ಪ್ರಾಣಪಾತ್ರೆ ತುಂಬಿತ್ತು ಕೂಡಲ ಸಂಗಮದೇವ"
"ದಾಸಿದೇವ ತನ್ನ ವಸ್ತ್ರವನ್ನಿತ್ತು ತವನಿಧಿಯ ಪ್ರಸಾದವ ಪಡೆದ..."
"ದಾಸನ ವಸ್ತ್ರವ ಬೇಡಿದಾತ ನೀ ದೇವಾ ಕೂಡಲ ಸಂಗಮದೇವ"**

ಬಸವಣ್ಣನವರು ಮಾತ್ರವಲ್ಲದೆ ಇನ್ನೂ ಅನೇಕ ವಚನಕಾರರೂ ಮತ್ತು ಹರಿಹರ, ಭೀಮಕವಿ ಮೊದಲಾದ ಕವಿವರರೂ ದಾಸಿಮಯ್ಯನ ಮಹತ್ವವನ್ನು ಬಣ್ಣಿಸಿದ್ದಾರೆ. ಹರಿಹರನು "ದಾಸಿಮಯ್ಯನ ರಗಳೆ" ಎಂಬ ಕಾವ್ಯವನ್ನೇ ಬರೆದಿದ್ದಾನೆ. ಭೀಮಕವಿಯೂ ಸಹಾ ತನ್ನ "ಬಸವಪುರಾಣ"ದಲ್ಲಿ ದಾಸಿಮಯ್ಯನ ಪವಾಡಗಳನ್ನು ಬಣ್ಣಿಸಿದ್ದಾನೆ. ಅರಸಿಕೆರೆಯ ಹಿರಿಯೂರು ಗೊಬ್ಬೂರು ಸ್ಥಳಗಳ ಶಾಸನಗಳಲ್ಲಿಯೂ ದಾಸಿಮಯ್ಯನ ವಿವರಣೆಯಿದೆ.

ಜೈನಕವಿ ಬ್ರಹ್ಮಶಿವನೂ ಈತನ ಹೆಸರನ್ನು ಉಲ್ಲೇಖಿಸಿದ್ದಾನೆ. ಹೀಗೆ ವಚನಕಾರರಲ್ಲಿ ಮೊಟ್ಟ ಮೊದಲಿಗನಾದ ಹಾಗೂ ತವನಿಧಿ ಪಡೆದ ಪವಾಡಪುರುಷನಾದ, ಉತ್ತಮ ವಚನಗಳನ್ನು ರಚಿಸಿದ ದಾಸಿಮಯ್ಯನ ಪುಣ್ಯಸ್ಮರಣೆಯು ಪವಿತ್ರತರವಾಗಿದೆ.

**ಚಂಪೂ ಸಾಹಿತ್ಯಕ್ಕೆ ಪಂಪ
ಷಟ್ಪದಿ ಸಾಹಿತ್ಯಕ್ಕೆ ರಾಘವಾಂಕ
ಸಾಂಗತ್ಯ ಸಾಹಿತ್ಯಕ್ಕೆ ರತ್ನಾಕರವರ್ಣಿ
ಮಹಾಛಂದಸ್ಸಿನ ಸಾಹಿತ್ಯಕ್ಕೆ ಕುವೆಂಪು -**

ಇರುವಂತೆ ವಚನಸಾಹಿತ್ಯಕ್ಕೆ ದಾಸಿಮಯ್ಯ ಶ್ರೇಷ್ಠನಾಗಿದ್ದಾನೆ.

ದಾಸಿಮಯ್ಯನು ಇದ್ದುದು ಚಾಲುಕ್ಯ ಜಯಸಿಂಹನ ಕಾಲ (೧೦೦೮-೧೦೪೦) ಎಂದರೆ ಹನ್ನೊಂದನೆಯ ಶತಮಾನದ ಆದಿಭಾಗ, ಈತನ ಸ್ಥಳ - ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದನೂರು. ಅಲ್ಲಿಯ ರಾಮಯ್ಯ ಮತ್ತು ಶಂಕರಿ ಎಂಬ ದಂಪತಿಗಳ ಪುಣ್ಯಪುತ್ರನಾಗಿ ಜನಿಸಿದ ದಾಸಿಮಯ್ಯ.

ದಾಸಿಮಯ್ಯನ ಕಾಯಕ ನೇಯ್ಗೆ. ಆರಾಧ್ಯದೈವ ಮುದನೂರಿನ ರಾಮನಾಥ. ಶ್ರೀಶೈಲದ ಗುಂಡದೇಶಿಕೇಂದ್ರರು ಈತನ ಗುರು. ನಂದಿಗ್ರಾಮ, ಗೌಡಗೆರೆ, ಪೊಟಲಿಗೆರೆ ಮೊದಲಾದ ಸ್ಥಳಗಳಲ್ಲಿ ಪ್ರವಚನ ಮಾಡಿ ಧರ್ಮಜಾಗೃತಿ ಯನ್ನುಂಟು ಮಾಡಿದ್ದಾನೆ.

ಚಾಲುಕ್ಯ ದೊರೆ ಜಯಸಿಂಹನ ಹೆಂಡತಿ ಸುಗ್ಗಲೆಯು ಈತನ ಧರ್ಮೋಪದೇಶದಿಂದ ಬೆಳಕು ಕಂಡು ಶಿವಪಥಗಾಮಿ ಯಾಗುವಳು. ಆದರೆ ರಾಜನು ಇದಕ್ಕೆ ವಿರೋಧ ಒಡ್ಡುವನು. ಪರಿಣಾಮ ವಿರಸ ಬೆಳೆಯಿತು. ಜೈನಪಂಡಿತರ ವಾದಗಳನ್ನೂ ದಾಸಿಮಯ್ಯ ಖಂಡಿಸುತ್ತಾನೆ.

**ಪವಾಡಗಳು**

ದಾಸಿಮಯ್ಯನನ್ನು ವಾದದಲ್ಲಿ ಸೋಲಿಸಲಾರದೆ ಕೆಲವರು ಪರಸಮಯವಾದಿಗಳು ಈತನಿಗೆ ವಿಷಬೆರೆಸಿದ ನೀರನ್ನು ಕುಡಿಯಲು ಕೊಡುವರು. ದಾಸಿಮಯ್ಯನು ಇದನ್ನು ಲಿಂಗಕ್ಕೆ ಅರ್ಪಿಸಿ ಗಟಗಟನೆ ಕುಡಿದನು. ವಿಷವು ಇವನಿಗೆ ಅಮೃತಪಾನವೇ ಆಯಿತು.

ಹೀಗೆಯೇ ಒಮ್ಮೆ ಕೊಡದಲ್ಲಿ ವಿಷಸರ್ಪವನ್ನಿಟ್ಟು ಇಲ್ಲಿ 'ಶಿವ'ನನ್ನು ತೋರಿಸು ಎಂದು ಪರಸಮಯಿಗಳು ಕೇಳಿದಾಗ ತಕ್ಷಣ ದಾಸಿಮಯ್ಯ ತನ್ನ ಮಹಿಮೆ ತೋರುವನು. ಆ ಸರ್ಪ ಇವನ ಹಸ್ತಸ್ಪರ್ಶದಿಂದ ಸ್ಫಟಿಕಲಿಂಗವಾಗುತ್ತದೆ. ಇದನ್ನೇ ಈತ ಪೊಟಲಕೆರೆಯಲ್ಲಿ ಸ್ಥಾಪಿಸುವನು.

**ಮದುವೆ**

ದಾಸಿಮಯ್ಯನ ತಾಯ್ತಂದೆಯರು ದಾಸಿಮಯ್ಯನಿಗೆ ಮದುವೆ ಮಾಡಲು ವಿಶೇಷ ಪ್ರಯತ್ನ ಮಾಡುವರು. ಕಠಿಣರೀತಿಯ ವಧು ಪರೀಕ್ಷೆಯೂ ನಡೆಯುತ್ತದೆ. ಕಲ್ಲು, ಮರಳು, ಅಕ್ಕಿ ಬೆರೆಸಿ ಅನ್ನ ಮಾಡಲು ಈತ ತಿಳಿಸುತ್ತಾನೆ. ಗೊಬ್ಬೂರಿನ ಮಲ್ಲಿನಾಥ-ಮಹಾದೇವಿಯರ ಸುಪುತ್ರಿ ದುಗ್ಗಳೆಯು ಈತನ ಪಾದಗಳಿಗೆ ನಮಸ್ಕರಿಸಿ ಪಾದೋದಕದಿಂದಲೇ ಪರಮಾನ್ನ ತಯಾರಿಸಿ ಈತನಿಗೆ ತಕ್ಕ ಸತಿಯಾಗುವಳು.

**ತವನಿಧಿ**

ಎಂದಿನಂತೆ ನೇಯ್ಗೆ ಕಾಯಕದಲ್ಲಿದ್ದಾಗ ಈತ ಒಂದು ಅಪೂರ್ವ ಬಟ್ಟೆಯನ್ನು ನೇಯುತ್ತಾನೆ. ಆದರೆ ಅದರ ಬೆಲೆ ಕಟ್ಟಲಾಗದೆ ಸುರಪುರದ ಸಂತೆಯಲ್ಲಿ ಮಾರಾಟವಾಗಲಿಲ್ಲ. ಒಬ್ಬ ವೃದ್ಧ ಜಂಗಮನು ಈತನ ಮನೆಗೆ ಬರುವನು. ಚಳಿಯಿಂದ ನಡುಗುತ್ತಿದ್ದ ಜಂಗಮನಿಗೆ ಈತ ಅದನ್ನೇ ಹೊದಿಸುವನು. ಆ ಜಂಗಮನೋ ಇದನ್ನು ಹರಿದು ೪ ಚೂರು ಮಾಡಿ ತಲೆಗೆ ಸುತ್ತಿಕೊಳ್ಳುವನು. **'ಶಿವನ ಒಡವೆ ಶಿವನಿಗೆ ಸಂದಿತು'** ಎಂದು ಕೊಂಡನು. ಆ ಜಂಗಮನು ಒಂದು ತುಂಡನ್ನು ಧಾನ್ಯದ ರಾಶಿಯಲ್ಲಿಡಿ ಎಂದಿದ್ದನು. ಮಾರನೆಯ ದಿನದ ಧಾನ್ಯದ ಕಣಜ ಅಕ್ಷಯ ನಿಧಿಯಾಗಿದ್ದಿತು. ನಿತ್ಯ ದಾಸೋಹ ಮಾಡುತ್ತಾನೆ ದಾಸಿಮಯ್ಯ - ತವನಿಧಿಯ ದಾಸಿಮಯ್ಯನೆನಿಸುತ್ತಾನೆ. ಹೀಗೆಯೇ ಸಾರ್ಥಕ ಬದುಕು ಸಾಗಿಸುತ್ತಾನೆ. ದಾಸಿಮಯ್ಯನ ವಚನಗಳೂ ಅರ್ಥಕಾಂತಿಯಿಂದ ಕೂಡಿವೆ.

**ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ,**
**ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸೆದ,**
**ಶರೀರದೊಳಗೆ ಆತ್ಮನ ಆರೂ ಕಾಣದಂತಿರಿಸಿದೆ,**
**ನೀವು ಬೆರೆಸಿದ ಭೇದಕ್ಕೆ ಬೆರಗಾದೆನಯ್ಯ - ರಾಮನಾಥ.**
**ಮರದಲ್ಲಿ ಬೆಂಕಿ, ಹಾಲಿನಲ್ಲಿ ತುಪ್ಪ ಹೀಗೆ ಶಿವನ ಸರ್ವಾಂತರ್ಯಾಮಿತ್ವ**
**ಆಡಬಾರದ ಬಯಲು, ಸೂಡಬಾರದ ಬಯಲು**
**ನುಡಿಯಬಾರದ ಬಯಲು, ಹಿಡಿಯಬಾರದ ಬಯಲು**
**ಈ ಒಡಲಿಲ್ಲದ ಬಯಲೊಳಗೆ ಅಡಗಿಪ್ಪ ಭೇದವ**
**ಈ ಲೋಕದ ಜಡರೆತ್ತ ಬಲ್ಲರು ರಾಮನಾಥ?**

ಅನುಭಾವವು ಪ್ರತಿಯೊಬ್ಬರಿಗೂ ಅಗತ್ಯ. ಅನುಭಾವ ವಿಲ್ಲದವನ ಭಕ್ತಿ ತಲೆ ಕೆಳಗಾದುದಯ್ಯ. ಅನುಭಾವ ಭಕ್ತಿಗೆ ಆಧಾರ ಎಂದಿದ್ದಾನೆ.

**ಒಡಲೆಂಬ ಬಂಡಿಗೆ ಮೃಡಭಕ್ತರ ನುಡಿಗಡಣವೇ ಕಡೆಗೀಲು.** ಈ ವಚನ ಅತ್ಯಂತ ಸ್ವಾರಸ್ಯವಾಗಿದೆ. ಜೀವನವನ್ನು ನಿಯಂತ್ರಿಸುವ ಔನ್ನತ್ಯಕ್ಕೊಯ್ಯುವ ಸಾಧನ ಶಿವಪಥ. ಈ ಶಿವಪಥದ ಅತಿರಥ ಅನುಭಾವಿ ದೇವರ ದಾಸಿಮಯ್ಯ.

ನಮ್ಮ ಕಣ್ಣು, ಕೈ, ಕೀಲು, ನಾಲಗೆಗಳು ಶಿವನಿಗೆ ಮೀಸಲಾಗಲಿ ಎಂದು ಸಾರಿರುವ ದಾಸಿಮಯ್ಯನನ್ನು ಮರೆಯಲು ಅಸಾಧ್ಯ. ಶಿವನ ಒಲುಮೆಗೆ ಪಾತ್ರನಾದನು ಈತ. ದೇವನ್ + ಒಲಿದಾತ ಸತ್ಕುಲಜ ಎಂದು ಸರ್ವಜ್ಞ ಒಂದೆಡೆ ಹೇಳಿರುವಂತೆ ಶಿವನ ಒಲುಮೆಗೆ ನಾವೂ ಪಾತ್ರರಾಗುವಂತಿರಬೇಕೆಂಬುದು ಮುಖ್ಯವಾಗಿದೆ. ಇದಕ್ಕೆ ದಾಸಿಮಯ್ಯನೇ ಮೇಲುಪಂಕ್ತಿಯಾಗಿದ್ದಾನೆ.





# ರವೀಂದ್ರನಾಥ ಠಾಕೂರರ ಮಾನವತಾ ಸಿದ್ಧಾಂತ

**- ಎಂ.ಬಿ. ಸದಾಶಿವಯ್ಯ,**
ಆಂಗ್ಲಭಾಷಾ ಪ್ರಾಧ್ಯಾಪಕರು,
ಸಿದ್ಧಗಂಗಾ ಪುರುಷರ ಕಾಲೇಜು,
ತುಮಕೂರು-2

"He was human and humane, a fully developed man who responded as keenly to the joy of life as he did to the cry of human distress. He was the lover of the people, a lover whose loyalty was pledged to all mankind. All his life he pledged and strove for social justice for the right of the lowly to the dignity. The religion he preaches is the religion of man".

- Krishna Kripalani

ರವೀಂದ್ರನಾಥ ಠಾಗೂರರು ಶ್ರೇಷ್ಠಕವಿಗಳು, ಮಾರ್ಗದರ್ಶಕರು, ಪ್ರಾಜ್ಞರು, ದಾರ್ಶನಿಕರು ಹಾಗೂ ಮಹೋನ್ನತ ಖ್ಯಾತಿಗಳಿಸಿದ ಹಿರಿಯ ಭಾರತೀಯರು. ಡಾ. ರಾಧಾಕೃಷ್ಣರವರ ಮಾತಿನಲ್ಲೇ ಹೇಳುವುದಾದರೆ "ನಮ್ಮನಾಡನ್ನು ವಿದೇಶೀಯರು, ಗೌರವದಿಂದ ಕಾಣುವುದು ಅವರ ಬರಹಗಳಿಂದ.

ಎರಡು ರಾಷ್ಟ್ರಗಳ ರಾಷ್ಟ್ರಗೀತೆಗಳನ್ನು ವಿಭಿನ್ನ ಭಾಷೆಗಳಲ್ಲಿ ಬರೆದು (ಭಾರತ-ಜನಗಣಮನ, ಹಿಂದಿ, ಬಾಂಗ್ಲಾದೇಶ-ಸೋನಾರೆ ಬಾಂಗ್ಲ ಬಂಗಾಳಿ) ಎರಡು ರಾಷ್ಟ್ರಗಳ ರಾಷ್ಟ್ರಕವಿ ಎನಿಸಿಕೊಂಡಿರುವ ಏಕೈಕ ಮಹಾಕವಿ. ಅವರೊಬ್ಬ ಪ್ರತಿಭಾನ್ವಿತ, `Myriad minded poet, many splendowned genius'. ಏಷಿಯಾ ಖಂಡದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ 'ನೊಬೆಲ್ ಪಾರಿತೋಷಕ' ಪಡೆದ ಪ್ರಥಮ ಕವಿ.

ಕಲ್ಕತ್ತೆಯ ಸುಪ್ರಸಿದ್ಧ ಠಾಕೂರ್ ವಂಶದ ಜರಾಶಂಕೋ ಮನೆಯಲ್ಲಿ ಮೇ ೭, ೧೮೬೧ರಲ್ಲಿ ಇವರ ಜನನ. ವಿದ್ಯೆ, ಸಂಪತ್ತು, ಸಂಸ್ಕೃತಿ, ನೀತಿ, ನಿಷ್ಠೆ ಹಾಗೂ ಸೃಜನಶೀಲತೆಯಿಂದ ತುಂಬಿ ತುಳುಕುತ್ತಿದ್ದ ಮನೆಯ ವಿಶೇಷ ವಾತಾವರಣ ಠಾಕೂರರ ಮಾತಲ್ಲೇ ಹೇಳುವುದಾದರೆ,

"Most of the members of my family had some giftsome were artists, some poets, some musicians and the whole atmosphere was permeated with the spirit of creation".

ಇಂದಿನ ಬೇಸರ ಜನಕ, ಕೃತಕ, ಸತ್ಯಹೀನ, ಮೌಲ್ಯ ರಹಿತ ಶಿಕ್ಷಣ ವಾತಾವರಣದ ವಿರುದ್ಧ ಕೆರಳಿ "School is a ledeously cruel combination of hospital and jail" ಎಂದು ಕರೆದು, ಶಿಕ್ಷಣವನ್ನು ಅರ್ಥಪೂರ್ಣವಾಗಿ ಮಾಡಿದ ಮಹಾನ್ ರೂವಾರಿ.

ಭಾರತದ ಪುನರುಜ್ಜೀವನ ಸಿದ್ಧಾಂತ, ಅಮೇರಿಕ ಫಲ ಪ್ರಮಾಣವಾದ (Pragmatism) ಆಗಸ್ಟ್ ಕಾಂಪ್ಟೆರವರ ಮಾನವೋತ್ತಮವಾದ (Positivism)ಗಳಿಂದ ಪ್ರಭಾವಿತರಾಗಿ, ತಮ್ಮ ಕವಿಯ ದೃಷ್ಟಿ ಹಾಗೂ ಚಿಂತನಶೀಲತೆಯಿಂದ ಸೃಷ್ಟಿಯಲ್ಲಿ ಮಾನವ ಪರಿಕಲ್ಪನೆ ಹಾಗೂ ಮಾನವ ಸಿದ್ಧಾಂತಕ್ಕೆ ಒಂದು ಹೊಸ ಆಯಾಮವನ್ನು ಕೊಟ್ಟ ಮೇಧಾವಿ.

ಹಿಂದೂ, ಮಹಮ್ಮದೀಯ ಮತ್ತು ಆಂಗ್ಲ ಸಂಸ್ಕೃತಿಗಳ ಸಂಗಮದ ಮನೆಯಲ್ಲಿ ಬೆಳೆದ ಇವರ ಮೇಲೆ ಇನ್ನಿತರ ಪ್ರಭಾವಗಳೆಂದರೆ, ಉಪನಿಷತ್‌ಗಳು, ಕಾಳಿದಾಸ, ಕಬೀರ್ ಬಂಗಾಳದ ಜಾನಪದ ಸಾಹಿತಿ ಚೌಲ್, ಆಂಗ್ಲ ಮಹಾನ್ ಸಾಹಿತಿಗಳಾದ ಶೇಕ್ಸ್‌ಪಿಯರ್, ಮಿಲ್ಟನ್ ಮತ್ತು ಬೈರನ್ ಅವರ ಪ್ರಭಾವದ ಬಗ್ಗೆ ಠಾಕೂರರು ಈ ರೀತಿ ಹೇಳುತ್ತಾರೆ : "Our literary gods were Shakespeare Milton and Byron".

ಹನ್ನೊಂದು ಸಲ ಹಲವಾರು ರಾಷ್ಟ್ರಗಳ ಪ್ರವಾಸ ಕೈಗೊಂಡು ಸಂಕೀರ್ಣ ಮತ್ತು ವಿಶಾಲ ಮನೋಭಾವ ತಳೆದು, ಭಾರತ ಮತ್ತು ಸೌರಾಷ್ಟ್ರ ದೇಶಗಳ ಸಂಸ್ಕೃತಿಯ ಗರಿಮೆಯನ್ನು ತನ್ನ ಕಾವ್ಯಗಳ ಮತ್ತು ಇತರ ಬರಹಗಳ ಮೂಲಕ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಉಣಬಡಿಸಿ ವಿಶ್ವಮಾನ್ಯತೆ ಪಡೆದ ಯುಗಪುರುಷ.

ಸಾರಸ್ವತ ಲೋಕಕ್ಕೆ ಅವರ ಕೊಡುಗೆ ಅಪಾರ. ಎಂಟಕ್ಕೂ ಹೆಚ್ಚು ಕಾದಂಬರಿಗಳು, ಎಂಟಕ್ಕೂ ಹೆಚ್ಚು ಸಣ್ಣ ಕಥೆಗಳ ಸಂಗ್ರಹಗಳು, ಇಪ್ಪತ್ತನಾಲ್ಕು ನಾಟಕಗಳು ಮತ್ತು ಕಿರು ನಾಟಕಗಳು, ಧಾರ್ಮಿಕ, ರಾಜಕೀಯ ವಸ್ತುಗಳನ್ನೊಳಗೊಂಡ ನೂರಾರು ಗದ್ಯ ಕೃತಿಗಳು ಮತ್ತು ಪ್ರಬಂಧಗಳು, ಸಾವಿರಕ್ಕೂ ಹೆಚ್ಚು ಪದ್ಯಗಳು ಇವೆಲ್ಲವುಕ್ಕೂ ಮಿಗಿಲಾದ ಅವರ ಮೇರು ಕೃತಿ "ಗೀತಾಂಜಲಿ".

ತತ್ವಚಿಂತನೆ ಅವರ ಕಾವ್ಯಗಳಲ್ಲಿ ನವಿರಾಗಿ ಮಿಳನಗೊಂಡಿದೆ. ಅವರೊಬ್ಬ ಧಾರ್ಮಿಕ ತತ್ವಜ್ಞಾನಿ. ಆದರೆ ಅವರ ಧರ್ಮ ಮಾನವ ದರ್ಮ, ಅವರ ಚಿಂತನೆ ಮಾನವ ಚಿಂತನೆ. "He is never tired of singing about man in his poetry".

ಠಾಕೂರರು ಮಾನವಾತ್ಮನನ್ನು ಈ ಬೃಹತ್ ವಿಶ್ವಾತ್ಮನ ಸೃಷ್ಟಿಯಲ್ಲಿ ಬೆಲೆ ಇಲ್ಲದ ಅಥವಾ ಅರ್ಥಹೀನ ಜೀವಿಯಲ್ಲಿ ಬದಲಾಗಿ ಮಾನವ ಈ ಪ್ರಪಂಚದಲ್ಲಿ ನಿರ್ದಿಷ್ಟ ಧ್ಯೇಯೋದ್ದೇಶಗಳಿಗೆ, ಹಲವು ಸಾಧನೆಗಳಿಗೋಸ್ಕರ ನಿಯೋಜಿಸಲ್ಪಟ್ಟ ರಾಯಭಾರಿ ಎಂದು ನಂಬಿದ್ದರು. "Man has a mission to fulfill".

ಜಗತ್ತಿನ ವಿಕಾಸದಲ್ಲಿ ಮೊದಲು ನಿರ್ಜೀವರಾಶಿಯ ಸೃಷ್ಟಿ, ನಂತರ ಜೀವರಾಶಿ, ನಂತರ ಮಾನವಸೃಷ್ಟಿ. ಈತ ಬರೀ ಮಾನವನ ರೂಪವಲ್ಲ. ಬುದ್ಧಿಯ ಅರಿವುಳ್ಳ ಹಾಗೂ ಅವಶ್ಯಕವಾದ ಸೃಷ್ಟಿ - Energent Creation. ಮಾನವ ಮತ್ತು ಪ್ರಕೃತಿ, ಮಾನವ ಮತ್ತು ಮಾನವ ಹಾಗೂ ಮಾನವ ಮತ್ತು ದೇವರ ನಡುವಣ ಸಂಬಂಧಗಳು ಹೇಗಿರಬೇಕೆಂದು ತಿಳಿಹೇಳುವ ಪ್ರಯತ್ನವೇ ಅವರ ಕಾವ್ಯ.

ಠಾಕೂರರ ಕಾವ್ಯಗಳಲ್ಲಿ ಪಲಾಯನವಾದ (Escapism)ಕ್ಕೆ ಎಳ್ಳಷ್ಟೂ ಅವಕಾಶವಿಲ್ಲ. (Acceptance of life is the core of Tagore's poetry). ಜೀವನವನ್ನು ಒಪ್ಪಿಕೊಳ್ಳಬೇಕು, ಜೀವನದಲ್ಲಿ ಈಸಬೇಕು, ಈಸಿ ಜಯಿಸಬೇಕು. ಅವರ ಪ್ರಕಾರ ಸಾಂಸಾರಿಕ ಜೀವನವೇ ಸನ್ಯಾಸಾಶ್ರಮ. "Home life is hermitage".

ತ್ಯಾಗ, ಪರಿತ್ಯಾಗ ಮತ್ತು ಸಂನ್ಯಾಸಗಳೆಂಬ ಪದಗಳಿಗೆ ಹೊಸ ಸ್ವರೂಪವನ್ನು ಕೊಟ್ಟ ಇವರ ಮಾತಿನಲ್ಲಿ 'ಪರಿತ್ಯಾಗವೆಂದರೆ' ಜೀವನ ಪರಿತ್ಯಾಗವಲ್ಲ, ನಮ್ಮಲ್ಲಿರುವ ಸ್ವಾರ್ಥತೆಯನ್ನು ಸಂಕುಚಿತ ಸಂಕೋಲೆಗಳನ್ನು ಪರಿತ್ಯಾಗ ಮಾಡುವುದು. 'ವೈರಾಗ್ಯ ಮತ್ತು ಸನ್ಯಾಸ' ಅದೊಂದು ಮನಸ್ಸಿನ ಚೌಕಟ್ಟು A frame of mind.

ಮುಕ್ತಿ, ಮೋಕ್ಷವೆಂಬ ಒದ್ದಾಟವೇಕೆ? ಸೃಷ್ಟಿಕರ್ತ ಭಗವಂತನೇ ಸೃಷ್ಟಿಯ ಬಂಧನದಲ್ಲಿದ್ದಾನೆ.

"Our master himself has
joyfully taken upon him
the bonds of creation. He
is bound with us all forever".

ಮಡಿವ ಸಂಸ್ಕೃತಿ ಸಂಪೂರ್ಣವಾಗಿ ಕ್ಷೀಣಿಸುತ್ತಿರುವ ಇಂದಿನ ಸಮಾಜಕ್ಕೆ ಹಾಗೂ ಧರ್ಮದ ಹೆಸರಲ್ಲಿ ಅಂಧಶ್ರದ್ಧೆಯಿಂದ ಕಾಲಹರಣ ಮಾಡುವ ತತ್ವಗಳಿಗೆ ಮಹಾನ್ ಕವಿಯ ಮಾತು ಎಷ್ಟು ಪ್ರಸ್ತುತ. ದುಡಿಮೆಗೆ ಪರ್ಯಾಯವಿಲ್ಲ. ಕರ್ತವ್ಯ ಅಥವಾ ದುಡಿಮೆಯೇ ದೇವರು. ಜಪ, ತಪ ಮತ್ತು ಪ್ರಾರ್ಥನೆಯ ಬಗ್ಗೆ ಠಾಕೂರರು ಈ ರೀತಿ ಹೇಳುತ್ತಾರೆ.

**"ಎಲ್ಲಿ ರೈತನು ಒರಟು ಭೂಮಿಯನ್ನುಳುತ್ತಿರುವನೋ**
**ಎಲ್ಲಿ ಕೂಲಿಕಾರ ಕಲ್ಲು ಕುಟ್ಟುತ್ತಲಿರುವನೋ**
**ಅಲ್ಲಿಹನು ಭಗವಂತ ಮಳೆ ಬಿಸಿಲ ನಡುವೆ**

**ಇಳಿದು ಬಾ, ಅವನಂತೆ ನಿನಗೂ**
**ದುಡಿಮೆಯೇ ದೇವರಾಗಲಿ?**

ದೇವಾಲಯಗಳಿಂದಾಚೆ, ದುಡಿಯುವ ಕರ್ಮಚಾರಿಗಳಲ್ಲಿ ಭಗವಂತನನ್ನು ಕಾಣಬೇಕು ಇದು ನಿಜವಾದ ಪೂಜೆ, ನಿಜವಾದ ಪ್ರಾರ್ಥನೆ. ಅವಿರತ ದುಡಿಮೆಯನ್ನೇ ದೇವರನ್ನಾಗಿ ಮಾಡಿಕೊಂಡು ಗಮನಾರ್ಹ ಮುನ್ನಡೆ ಸಾಧಿಸಿದ ಮಹಾನ್ ರಾಷ್ಟ್ರಗಳ ಪ್ರಗತಿ ತತ್ವ ನಾವು ಅನುಸರಿಸುತ್ತಿಲ್ಲವೆಂಬ ಕಾಳಜಿಯ ದನಿ ಅವರ ಪದ್ಯಗಳಲ್ಲಿ ಕಾಣಬಹುದು.

ಸತ್ಯ ಮತ್ತು ಸೌಂದರ್ಯ - Truth and beatury - ಠಾಕೂರರ ದೃಷ್ಟಿಯಲ್ಲಿ ಮಾನವನಿಂದ ಸ್ವತಂತ್ರವಾದುದಲ್ಲ. ಇವುಗಳು ಮಾನವನಿಂದ ಹೊರತೆಂಬುವುದಾದರೆ, ಇವುಗಳ ಅಸ್ತಿತ್ವವೇ ಇಲ್ಲ. ಒಟ್ಟಾರೆ ಹೇಳುವುದಾದರ "Tagore's religion is centred round man" ಎಂದು ಹೇಳಬಹುದು. ಠಾಕೂರರು "ದೇವರಲ್ಲಿ ಮಾನವ, ಮಾನವನಲ್ಲಿ ದೇವರು" ಎಂಬ ಅಚಲ ಸಿದ್ಧಾಂತದಲ್ಲಿ ನಂಬಿಕೆ ಇಟ್ಟ ಈ ಸರ್ವ ಯುಗದ ಕವಿ.

ಠಾಕೂರರ ಮಾನವತಾ ಸಿದ್ಧಾಂತ ಪ್ರೀತಿ, ಅಂತಃಕರಣ ಮತ್ತು ಸೇವಾ ಮನೋಭಾವಗಳ ತಳಹದಿ ಮೇಲೆ ನಿಂತಿದೆ. ಮಾನವ ಹಿತಾಸಕ್ತಿ ಬಗ್ಗೆ ಚಿಂತಿಸುವಿಕೆ, ಭಗವಂತನ ಸೇವೆ ಬದಲು ಮಾನವ ಸೇವೆ, ಅಗೋಚರ ದೈವೀಶಕ್ತಿಗಿಂತಲೂ ಪ್ರತ್ಯಕ್ಷ ಪ್ರಮಾಣವಾದ ಜನತೆ ಪೂಜೆಯಲ್ಲಿ ತೊಡಗುವರು. 'ನರನಾರಾಯಣ' 'ದರಿದ್ರ ನಾರಾಯಣ' ಎಂಬ ಪದಗಳಿಗೆ ಹೊಸ ಪರಿಕಲ್ಪನೆ ಕೊಡುವುದರಲ್ಲಿ Tagore was ahead of his times ಎಂದರೆ ತಪ್ಪಾಗಲಾರದು.

ಠಾಕೂರರ ಮಾನವತಾ ಸಿದ್ಧಾಂತ ಭಗವಂತನನ್ನು ಮಾನವೀಕರಿಸುವುದರಲ್ಲಿ ರೂಪುಗೊಳ್ಳುತ್ತದೆ ಎಂಬ ಅಂಶ ಗೀತಾಂಜಲಿಯ ಹತ್ತನೆಯ ಪದ್ಯದಲ್ಲಿ ಕಾಣಬಹುದು.





**''ಇಲ್ಲಿದೆ ಕಾಲುಮಣೆ, ಅಲ್ಲಿದೆ ನಿನ್ನ ಪಾದಗಳು,**
**ಎಲ್ಲಿ ದೀನದಲಿತರು ಪತಿತರು ಇರುವರೋ ಅಲ್ಲಿ**
**ನಮಿಸಲು ಬಗ್ಗಿಸುವೆ ಶಿರವನು, ತಾಕಲಾರವು ನಿನ್ನ**
**ನನ್ನ ಈ ಪೂಜೆ ಪ್ರಾರ್ಥನೆಗಳು''**

ಅವರ ಮಾನವತಾ ಸಿದ್ಧಾಂತ ಬಹು ಸಂಕೀರ್ಣವಾದ, ಎಲ್ಲವನ್ನೂ ತನ್ನೊಳಗೆ ಸ್ವೀಕರಿಸುವ, ಎಲ್ಲವನ್ನೂ ತನ್ನೊಳಗೆ ತಬ್ಬಿಕೊಳ್ಳುವ ಸಿದ್ಧಾಂತ - all embracing humanism. ಈ ಆದರ್ಶಗಳು ಮತ್ತು ಚಿಂತನೆಗಳು ತಮ್ಮ ಆಚರಣೆಯ ಆಧಾರದ ಫಲವಾದ್ದರಿಂದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ, ಅದರಲ್ಲೂ ಅಮೇರಿಕಾದಲ್ಲಿ ಹೆಚ್ಚು ಸ್ವೀಕರಿಸಲ್ಪಡುತ್ತಿವೆ. Martin Caroll, "Ambassador Extra-ordinary" ಎಂಬ ಪ್ರಬಂಧದಲ್ಲಿ ಈ ರೀತಿ ಹೇಳಿದ್ದಾರೆ.

"The Poet's religious verse immediately found favour in many circles; in American homes its place was next to the Bible and family manuals of religious devotion".

ಠಾಕೂರರ ದೃಷ್ಟಿಯಲ್ಲಿ ಭಗವಂತನು ಸ್ಪಷ್ಟವೂ, ಶ್ರೇಷ್ಠವೂ ಆದ ಮನುಷ್ಯನ ರೂಪದಲ್ಲಿ ಆವಿರ್ಭವಿಸುತ್ತಾನೆ. ಅವನನ್ನು ಸಮೀಪಿಸಬೇಕಾದರೆ ಮನುಷ್ಯನೇ ತಕ್ಕ ಸಾಧನೆ, ತಕ್ಕ ಮಾರ್ಗ. ಎಲ್ಲರೂ ದೈವ ಸ್ವರೂಪರೇ. ಆದರೆ ಅತ್ಯಂತ ದರಿದ್ರರೂ, ನಿರ್ಗತಿಕರಿಗೆ ಸಲ್ಲುವ ಸೇವೆ ಅತ್ಯಂತ ಶ್ರೇಷ್ಠ. ಈ ನಿಟ್ಟಿನಲ್ಲಿ ಅವರು ಮಾರ್ಗದರ್ಶಕರಾಗಿ ತಪಸ್ಸಿಗಾಗಿ ಸ್ಥಾಪಿಸಿದ "ಶಾಂತಿನಿಕೇತನ"ವನ್ನು "ವಿಶ್ವಭಾರತಿ"ಯಾಗಿ ಪರಿವರ್ತಿಸಿ, ಜೊತೆಗೆ "ಶ್ರೀನಿಕೇತನ"ವೆಂಬ ಸಂಸ್ಥೆ ಸ್ಥಾಪಿಸಿ, ವಿಶ್ವದ ಎಲ್ಲ ಮೂಲೆಗಳಿಂದ ಬಂದ ಜನರಿಗೆ ಶಿಕ್ಷಣದ ಜೊತೆಗೆ, ಜನಹಿತ ಕಾರ್ಯಗಳಲ್ಲಿ ತೊಡಗಿಸುವುದನ್ನು ಕಾಣಬಹುದು. ಈ ಮೇಲ್ಪಂಕ್ತಿಯಲ್ಲಿ "ಸಾಹಿತಿ ಠಾಕೂರರು ಸಮಾಜ ಸೇವಕರಾಗುತ್ತಾರೆ". ಅಂದಿನ ಸಮಾಜದಲ್ಲಿ ಬಲವಾಗಿ ಬೇರೂರಿದ್ದ ಮೂಢನಂಬಿಕೆಗಳಾದ ಬಾಲ್ಯವಿವಾಹ ಮತ್ತು ಸತಿ ವಿರುದ್ಧ ಹಾಗೂ ಭಾರತೀಯರ ದಾಸ್ಯ ಮನೋಭಾವ ಹಾಗೂ ಬ್ರಿಟೀಷರ ಗುಲಾಮಗಿರಿಗಳ ವಿರುದ್ಧ ವಿಡಂಬನಾತ್ಮಕ ಟೀಕೆಗಳನ್ನು, ಅವರ ಎಲ್ಲ ಪ್ರಾಕಾರದ ಬರವಣಿಗೆಗಳಲ್ಲಿ ಕಾಣಬಹುದು. ●

## ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

೧. ಸುಜೀರ್ಣಮನ್ನಂ ಸುವಿಚಕ್ಷಣಃ ಸುತಃ
ಸುಶಾಸಿತಾ ಸ್ತ್ರೀ ನೃಪತಿಃ ಸುಸೇವಿತಃ।
ಸುಚಿಂತ್ಯ ಚೋಕ್ತಂ ಸುವಿಚಾರರ್ಯಯತ್ಕೃತಂ
ಸುಧೀರ್ಘಕಾಲೇಽಪಿ ನಯಾತಿ ವಿಕ್ರಿಯಾಮ್ ॥

**ಅರ್ಥ:** ಜೀರ್ಣಿಸಿದ ಆಹಾರ, ಚತುರಮತಿ ಸುತನು
ವಶವರ್ತಿ ಸತಿ ಮತ್ತು ದೊರೆಯಿರಲು ಸೇವಿತನು
ತಿಳಿದಾಡಿದಂಥ ನುಡಿ, ವಿವೇಚನೆಯ ಕಾರ್ಯ
ಉಳಿಯುವುದು ಕೆಡದಂತೆ ಬಹುಕಾಲ ಗೆಳೆಯ!

೨. ಅಸಂಭವಂ ಹೇಮಮೃಗಸ್ಯ ಜನ್ಮ
ತಥಾಪಿ ರಾಮೋ ಲುಲುಭೇ ಮೃಗಾಯ।
ಪ್ರಾಯಃ ಸಮಾಪನ್ನ ವಿಪತ್ತಿ ಕಾಲೇ
ಧಿಯೋಽಪಿ ಪುಂಸಾಂ ಮಲಿನಾ ಭವಂತಿ॥

**ಅರ್ಥ:** ಹೊನ್ನಜಿಂಕೆಯ ಹುಟ್ಟು ಇರದೆಂದು ರಾಮ
ಚೆನ್ನಾಗಿ ಅರಿತಿದ್ದೂ, ಬೆನ್ನಟ್ಟಿ ಹೋದ.
ಸಂಕಷ್ಟ ಬಂದಾಗ ಮಾನವನ ಬುದ್ಧಿಗೂ
ಮಂಕು ಕವಿದಾಗುವುದು ಅದು ಬಹಳ ಮಸಕು.

೩. ಉದಯತಿ ಯದಿ ಭಾನುಃ ಪಶ್ಚಿಮೋ ದಿಗ್ವಿಭಾಗೇ
ಪ್ರಚಲತಿ ಯದಿ ಶೀತತಾಂ ಯಾತಿ ವಹ್ನಿಃ।
ವಿಕಸತಿ ಯದಿ ಪದ್ಮಂ ಪರ್ವತಾಗ್ರೇಃ ಶೀಲಾಯಾಂ
ನ ಭವತು ಪುನರುಕ್ತಂ ಭಾಷಿತಂ ಸಜ್ಜನಾನಾಮ್॥

**ಅರ್ಥ:** ಪಡುವಣದ ದಿಕ್ಕಿನಲಿ ರವಿಯುದಯವಾದರೂ
ಸುಡವ ಬೆಂಕಿಯು ತಾನು ತಂಪಾಗಿ ಉರಿದರೂ
ಗಿರಿಶಿಖರದಲ್ಲಿರಳಿ ಕಮಲ ತಾ ಮೆರೆದರೂ
ಪರಮ ಪುರುಷರು ತಮ್ಮನುಡಿಮೀರಿ ನಡೆಯರು.

- **'ಕಾವ್ಯಸುಧಾಪ್ರಿಯ'**

## ಆಹ್ವಾನ

ಮುಗಿಯಿತು - ಮುಗಿಯಿತು
ಇಪ್ಪತ್ತರ ಈ ಶತಮಾನ
ಬಂದಿತು ಹರುಷ ತಂದಿತು
ಇಪ್ಪತ್ತೊಂದನೆ ಆಹ್ವಾನ

ಸಾಸಿರ ವರ್ಷದ ಈ ಸರ್ವದಿನ
ಸೆಳೆದಿದೆ ವಿಶ್ವದ ಜನತೆಯ ಗಮನ
ಕಂಡು ನಲಿವವರ ಭಾಗ್ಯದ ಸುದಿನ
ಸಹಸ್ರಮಾನದ ಈ ಶತಮಾನ

ಸದಾ ಬೆಳಗುವರು ರವಿ ಚಂದಿರರು
ಜೀವರ ಉಸಿರು ಪ್ರಕೃತಿ ಪುರುಷರು
ಎಂದಿಗೂ ಒಂದೆ ಸಮವಾಗಿಹರು
ಕಾಲಚಕ್ರವಿದು ಏರು- ಪೇರು

ನೆಲವೂ ಒಂದೆ ಜಲವೂ ಒಂದೆ
ಗಾಳಿಯು ಉರಿಯುವ ಬೆಂಕಿಯು ಒಂದೆ
ಅಂಟದ ಮುಟ್ಟದ ಗಗನವು ಒಂದೆ
ಶತಮಾನವು ಬದಲಾಗುತಿದೆ.

ಮಣ್ಣಿನ ದಾಹವು ತೀರದಿದೆ
ಯುದ್ಧಭೀತಿ ಮರುಕಳಿಸುತಿದೆ
ಪ್ರಕೃತಿ ಮುನಿದು ವಿಕೋಪತೋರಿದೆ
ಜೀವನ ಭಯದಲಿ ಸಾಗುತಿದೆ

ಶರಣರ ಹನ್ನೆರಡನೆ ಶತಮಾನ
ಹದಿನೈದು ಹರಿದಾಸರ ಗಾನ
ವಿಸ್ಮಯ ಗೊಳಿಸಿದೆ ವಿಜ್ಞಾನ
ಇಪ್ಪತ್ತರ ಅಣು ಅಸ್ತ್ರದ ಧ್ಯಾನ

ಕಣ್ಣೆರೆಸಲಿ ಇಪ್ಪತ್ತೊಂದು
ಸಕಲ ಜೀವರಲಿ ಶಿವನಿಹನೆಂದು
ದ್ವೇಷ ಭಾವಗಳ ನಳಿಸೆಂದು
ಬೇಡುವ ವೀರೇಶನ ನಿಂದು

- **ವೀರೇಶ್, ವಿಜಯಪುರ**





# ಮನಸ್ಸು

- **ಪ್ರೊ. ವಸಂತ ಕುಷ್ಟಗಿ**
ಎಂ.ಐ.ಜಿ. ೨೬, ಆದರ್ಶನಗರ,
ಮೊದಲಹಂತ, ಕಲಬುರಗಿ-೫೮೫ ೧೦೫

**'ಚಿನ್ನದಂತಹ ಮನಸ್ಸು'** ಎಂದು ಒಂದು ಉದ್ಗಾರವಿದ್ದರೆ, ಇನ್ನೊಂದೆಡೆ **'ಬೆಂಕಿ ಹಚ್ಚಾ ಈ ಮನಸ್ಸಿಗೆ'** ಎಂಬ ಉದ್ಗಾರವೂ ಇದೆ. ಒಟ್ಟಾರೆ ಈ ಮನಸ್ಸು ಬಹು ವಿಚಿತ್ರವಾದ ವಸ್ತು. ಕಣ್ಣಿಗೆ ಕಾಣುವುದಿಲ್ಲ, ಕಿವಿಗೆ ಕೇಳಿಸುವದಲ್ಲ, ಮುಟ್ಟಿ ನೋಡುವಂತಹದಲ್ಲ, ರುಚಿಗೆ ಅಳವಡುವಂತಹದಲ್ಲ, ವಾಸನೆಗೆ ನಿಲುಕುವಂತಹದಲ್ಲ. ಅದರ ಆಕಾರ-ವಿಕಾರಗಳನ್ನು ಅಳೆಯುವುದು ಕಷ್ಟಸಾಧ್ಯ. ಅಂತೆಯೇ ಮನಸ್ಸೆಂಬುದು ಆಕಾಶ ಎಂದು ಬಗೆಯುತ್ತಾರೆ. ಹೀಗಿದ್ದರೂ ಅವರವರ ಮನಸ್ಸಿನ ಸ್ವರೂಪ, ಜ್ಞಾನವು ಅವರವರಿಗೆ ಇದ್ದೇ ಇರುತ್ತದೆ. ಆದರೂ ಇನ್ನೊಬ್ಬರ ಮನಸ್ಸಿನ ಸ್ವರೂಪ ಜ್ಞಾನವನ್ನು ಅನುಭವದಿಂದ, ಅಂತಃಕರುಣೆಯ ಕಣ್ಣಿನಿಂದ ತಿಳಿದುಕೊಳ್ಳಲು ಸಾಧ್ಯವಾಗಬಹುದು. ಆದರೆ ಇನ್ನೊಬ್ಬರ ಮನಸ್ಸಿನ ಅನುಭವವು ಬೇರೊಬ್ಬರಿಗೆ ಆಗಬೇಕಾದರೆ ಅದು ಸತ್ಯದ ಸಮೀಪಕ್ಕೆ ಹೋಗುವ ಮಾತುಮಾತ್ರ. ಅದರ ನಿಲುಗಡೆಯಲ್ಲಿ ಬೇರೆಯವರ ಮನಸ್ಸಿನ ಸ್ವರೂಪದ ನಿಲುವು ಪೂರ್ಣಾಂಶವಾಗಲಾರದು. ಆದರೂ ಮನಸ್ಸಿನ ಮಹಿಮೆ ವಿಚಿತ್ರವಾದದ್ದು. ಹಿಡಿದರ ಹಿಡಿತುಂಬ, ಬಿಟ್ಟರೆ ವಿರಾಟ ಸ್ವರೂಪಿಯ ಮೂರು ಹೆಜ್ಜೆ.

**'ಮನುಷ್ಯ ಸ್ವತಂತ್ರ'** ಎಂಬ ಪದ ಸಮುಚ್ಚಯವನ್ನು ಸಾಮಾನ್ಯವಾಗಿ ಬಳಸುತ್ತೇವೆ. ಅವನೇನೋ ಸ್ವತಂತ್ರನೆಂದು ಇಟ್ಟುಕೊಳ್ಳೋಣ. ಇದಕ್ಕೆ ಕಾರಣ ಅವನ ಕಾಲು ನೆಲಕ್ಕೆ ಹತ್ತುವಂತಹುದಲ್ಲ. ಅವನ ತಲೆ ಆಕಾಶವನ್ನು ತಟ್ಟುವಂತಹುದಲ್ಲ. ಕೈಕಾಲುಗಳು ದಿಕ್ಕುಗಳಲ್ಲ. ಇಂತಹ ಮನುಷ್ಯನ ಒಳಗೆ ಮನಸ್ಸು ಎಂಬುದು ಇರುತ್ತದೆ. ಬಹುಶಃ ಅದರಿಂದಾಗಿ 'ಮನುಷ್ಯ ಸ್ವತಂತ್ರ' ಇರಬೇಕೆ? ಇರಬಹುದು. ಅದು ಇರುವುದರಿಂದಲೇ ನೋವು ನಲಿವುಗಳ ಅನುಭವ. ಅಲ್ಲಿ ಅವನು ಕಾಲಕಾಲಕ್ಕೆ ಕುಗ್ಗುತ್ತಿರುತ್ತಾನೆ. ಹಿಗ್ಗುತ್ತಿರುತ್ತಾನೆ. ಆದರೆ ಮನಸ್ಸು ಹೇಳಿದಂತೆ ಮಿತಿಮೀರಿ ಸಾಗಿದರೆ ಅದರ ಗತಿಯು ನಿಂತುಹೋಗುತ್ತದೆ.

ಸಾಮಾನ್ಯವಾಗಿ ಮನುಷ್ಯ, ತನ್ನ ಗೇಣು ಹೊಟ್ಟೆ, ಗೇಣು ಬಟ್ಟೆಗಾಗಿ ಮಾತ್ರ ಹ್ವಾರೆಯಲ್ಲಿ ಉಳಿಸಿಕೊಂಡು, ಉಳಿದುದನ್ನು ಪರಿಸರಕ್ಕೆ ಬಿಟ್ಟುಬಿಡಬೇಕು. ಹಾಗೆ ಮಾಡದೆ ಮಿತಿಮೀರಿ ಬಂದುದನ್ನೆಲ್ಲ ತಾನೇ ಇಟ್ಟುಕೊಂಡರೆ ಅಜೀರ್ಣವಾಗುತ್ತದೆ. ಬಟ್ಟೆ ಹೆಚ್ಚಾಗಿ ಗಾಳಿ ಕಾಣದೆ ರೋಗ-ರುಜಿನಗಳಿಗೆ ತುತ್ತಾಗಬೇಕಾಗುತ್ತದೆ. ಅರ್ಥಾತ್ ಎಲ್ಲ ಭಾಗ್ಯಗಳಲ್ಲಿ ಶ್ರೇಷ್ಠ ಭಾಗ್ಯ - ಆರೋಗ್ಯ. ಅದರಿಂದಲೇ ಎರವಾಗಬೇಕಾಗುತ್ತದೆ. ಹೀಗಿ ಮಿತಿಮೀರಿ ಮನಸ್ಸಿಗೆ ಬಂದಂತೆ ನಡೆದರೆ ಅದು ಸ್ವೇಚ್ಛಾಚಾರವಾಗಿ ಆಕ್ರಮಣಕಾರ ಮನೋವೃತ್ತಿಯು ಬೆರೆಯುತ್ತದೆ. ಗೃಹಸ್ಥ ಜೀವನದ ಮೌಲ್ಯವಾದ ಹೊಂದಾಣಿಕೆಯ ಬದುಕು ಶೂನ್ಯವಾಗುತ್ತದೆ. ಗಂಡಾಂತರಗಳ ಮಡುವಿನಲ್ಲಿ ಸಿಕ್ಕು ಕೊಳೆತು ಹೋಗಬೇಕಾಗುತ್ತದೆ. ಆದರೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಸಾಗಿದರೆ ಸೃಷ್ಟಿಯೆಲ್ಲ, ಸೃಷ್ಟಿಯ ಬದುಕೆಲ್ಲ ಮೃದುಮಧುರವಾಗುತ್ತದೆ. ಶುಚಿರ್‌ಭೂತವಾಗುತ್ತದೆ. ಈ ಮಾತಿಗೆ ಮಾತು ಸೇರಿಸುವಾಗ ರಾವಣನು ದುರ್ಲಂಘ್ಯಪುರದ ಭೀಷಣ ಕೋಟೆಯನ್ನು ಗೆದ್ದ ಘಟನೆ ನೆನಪಾಗುತ್ತದೆ. ಅದನ್ನು ನಾಗಚಂದ್ರ, ರಾಮಚಂದ್ರ ಚರಿತ ಪುರಾಣದಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ. ಜೈತ್ರಯಾತ್ರೆಗೆ ಹೊರಟ ರಾವಣನು ದುರ್ಲಂಘ್ಯಪುರದ ಕೋಟೆಯನ್ನು ಗೆಲ್ಲುವ ಗುಟ್ಟನ್ನು ಆ ರಾಜ್ಯದ ರಾಣಿ ಉಪರಂಭೆಯಿಂದ ತಿಳಿದುಕೊಂಡು ಗೆದ್ದ. ಉಪರಂಭೆ ಆತನನ್ನು ಮೋಹಿಸಿ ಬಂದಾಗ, "ನೀನು ನನಗೆ ಕೋಟೆ ಗೆಲ್ಲುವುದಕ್ಕೆ ಮಾರ್ಗದರ್ಶನ ಮಾಡಿರುವೆ, ಆದ್ದರಿಂದ ನೀನು ನನ್ನ ಗುರು" ಎಂದು ಅವಳಿಗೆ ನಮಿಸಿ ತನ್ನ ವ್ಯಕ್ತಿತ್ವವನ್ನು ಇನ್ನಷ್ಟು ಉತ್ತುಂಗಗೊಳಿಸಿಕೊಂಡ. ಇಲ್ಲಿ ಮನಸ್ಸು ಗೆದ್ದುಕೊಂಡ ಸ್ಥಿತಿಯು ನಿವೇದ್ಯವಾಗಿದೆ. ಮಾತಿನ ಒಳಗು ಸ್ಪಷ್ಟವಾಗಿದೆ.

ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದೆಂದರೆ ವಿವೇಕದ ಬೆಳಕನ್ನು ನಂದಿಸದೆ ವಿಚಾರಗಳಿಂದ ತುಂಬಿ ಪಸರಿಸಿದರೆ ಮನುಷ್ಯನು ಯಾರಿಗೂ ಭಾರವಾಗದೆ ತನ್ನ ಆಸೆ-ಆಕಾಂಕ್ಷೆಗಳನ್ನು ತೃಪ್ತಿಗೊಳಿಸಿಕೊಳ್ಳುತ್ತ ತನ್ನ ಸಂಸಾರದಲ್ಲಿ, ತನ್ನ ಪರಿಸರದಲ್ಲಿ, ತನ್ನ ಪ್ರಪಂಚದಲ್ಲಿ, ನೆಮ್ಮದಿಯ ಬಾಳನ್ನು ಬದುಕುತ್ತಾನೆ. ವಿವೇಕವನ್ನು ಬಳಸದೇ ಹೋದಾಗ ಹಾಳುಬಾವಿಯ ನೀರಿನಲ್ಲಿ ಸಿಂಹವು ಹಣಕಿಹಾಕಿ, ತನ್ನ ಪ್ರತಿಬಿಂಬವನ್ನೇ ಬೇರೆ ಸಿಂಹ ಎಂದು ಬಗೆದು ಅದನ್ನು ಕೊಲ್ಲಲು ತಾನೇ ಆ ಹಾಳುಬಾವಿಯಲ್ಲಿ

ಹಾರಿ ಅಸುನೀಗಿದ ಕತೆಗೆ ಸಮನಾಗುತ್ತದೆ ಆ ಬದುಕು. ಆದ್ದರಿಂದ ಮನಸ್ಸು ಸದಾ ವಿವೇಕಪೂರ್ಣವಾಗಿದ್ದು ಪ್ರಶಸ್ತವಾಗಿರಬೇಕು.

ಬಾಯಾರಿಕೆಯಾದ ಕಾಗೆ ನೀರಿಗಾಗಿ ಅಲೆದಾಡಿ, ಪಾತ್ರೆಯ ತಳದಲ್ಲಿರುವ ನೀರನ್ನು ಕಂಡು, ಅದು ನಿಲುಕದೇ ಇದ್ದಾಗ ಹರಳುಗಳಿಂದ ಆ ಪಾತ್ರೆಯನ್ನು ತುಂಬತೊಡಗಿ, ನೀರಿನ ಪಾತ್ರ ಮೇಲಕ್ಕೆ ಬರುವಂತೆ ಮಾಡಿ ನೀರು ಕುಡಿದಿದ್ದು ಜಾಣತನದ ಪ್ರತೀಕ. ಇಲ್ಲಿ ಸದಸದ್ ವಿವೇಕದ ದೀಕ್ಷೆಯು ಮನಸ್ಸಿಗೆ ಇದೆ. ಅದಕ್ಕಾಗಿ ಇದು ಒಳ್ಳೆಯ ಮನಸ್ಸಿನ ಚಟುವಟಿಕೆ.

ಕಾಗೆಯ ಬಾಯಿಯಲ್ಲಿಯ ತಿಂಡಿಯನ್ನು ಕಸಿಯಲು ನರಿ, ಯುಕ್ತಿಯನ್ನು ಬಳಸಿ, ಹಾಡಿಸಿದಾಗ ತಿಂಡಿ ಕೆಳಗೆ ಬಿದ್ದುದೇ ತಡ ನರಿ ತಿನ್ನುತ್ತ ಹೋದದ್ದು ನರಿಯ ಜಾಣತನವಾದರೂ ಅಲ್ಲಿ ಸದಸದ್ ವಿವೇಕದ ದೀಕ್ಷೆಯಿಲ್ಲ. ಅದಕ್ಕಾಗಿ ಇಲ್ಲಿ ಮನಸ್ಸಿನಲ್ಲಿ ತುಂಬಿರುವ ಮೋಸತನ ಸ್ಫುಟವಾಗಿ ಕಾಣುತ್ತದೆ. ಆದ್ದರಿಂದ ಇದು ಕೆಟ್ಟ ಮನಸ್ಸಿನ ಚಟುವಟಿಕೆ.

ಈ ನೀತಿ ಕತೆಗಳಂತಿರಲಿ, ಸತ್ಯ ಕತೆಗಳು ಮಹಾ ಕಾವ್ಯವಾಗಿ ಮನಸ್ಸಿನ ವ್ಯಾಪಾರವನ್ನು ತಿಳಿಸುವಲ್ಲಿ ಇಂದಿಗೂ ಸ್ವಾರಸ್ಯವಾಗಿ ಉಳಿದಿವೆ. ದುರ್ಯೋಧನನು ತನ್ನ ಕೆಟ್ಟ ಮನಸ್ಸಿನ ಅತ್ಯಾಸೆಯಿಂದಾಗಿ ದ್ರೌಪದಿಯನ್ನು ತಡವಿ ನೆಲಕಚ್ಚಿದ. ಮೀಸೆ ಮಣ್ಣಾದರೂ ಆಗಿಲ್ಲ ಎಂದ. ಮನಸ್ಸು ಭಸ್ಮಾಸುರಗೊಳಿಸಿಕೊಂಡ ಕೀಚಕ, ಭೀಮನಿಂದ ಆಹುತಿಯಾದ. ಇಂದಿನ ಜೀವಮಾನಗಳಲ್ಲಿಯೂ ಇಂತಹ ಮನಸ್ಸಿನ ವ್ಯಾಪಾರವು ನಡೆದೇ ಇದೆ. ದುಃಖದ ಮಾತೆಂದರೆ ವರವಾಗಿ ಬಂದ ವಿಜ್ಞಾನವನ್ನು ಮನಸ್ಸಿನ ದಾಸನನ್ನಾಗಿಸಿಕೊಂಡು ಸಿಕ್ಕಾಪಟ್ಟೆ ಬಳಸಿಕೊಳ್ಳುತ್ತಿದ್ದಾನೆ. ಇದರಿಂದಾಗಿ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತ ಹೃದಯ ಸಿಪ್ಪಿಯಾಗುತ್ತ ಯಾಂತ್ರಿಕನಾಗತೊಡಗಿದ್ದಾನೆ. ರಸ ಇಂಗಿದ ಹಿಪ್ಪಿಯಂತಾಗಿದ್ದಾನೆ. ಆದ್ದರಿಂದ ಇಂಥ ದುಃಸ್ಥಿತಿಗೆ ಬಂದ ಮನುಷ್ಯನ ಮನಸ್ಸು ವಿವೇಕದ ತುಡಿತಕ್ಕೆ ಸ್ಪಂದಿಸುವಂತಾಗಬೇಕಾಗಿದೆ. ಆ ಸ್ಪಂದನೆಗೆ ಪುರುಷಾರ್ಥವು ಆತನ ಮನಸ್ಸನ್ನು ಸುಸಂಸ್ಕೃತಗೊಳಿಸುತ್ತದೆ. ಆಗ ಕಾಮಧೇನು, ಕಲ್ಪವೃಕ್ಷಗಳು ಅಂಗೈನೆಲ್ಲಿಯಾಗುತ್ತವೆ. ಅದರಿಂದಾಗಿ ಮನಸ್ಸು ಪರೋಪಕಾರಿ ಜೀವನವನ್ನು ನೆಲೆಗೊಳಿಸುವಲ್ಲಿ ಸಾರ್ಥಕ ಪಡೆಯುತ್ತದೆ. ವಿಜ್ಞಾನವು ಅಭಿಶಾಪವಾಗದೆ, ವರವಾಗಿಯೇ ಕ್ರಿಯಾಶೀಲವಾಗುತ್ತದೆ.

ಅದಕ್ಕಾಗಿ ಮನಸ್ಸು ಕಿಡಿಗೇಡಿ ಮಂಗನಾಗದೆ, ಅದು ಮಾನವಾಂತಃಕರುಣೆಯನ್ನು ಚಿಲಿಮಿಸುವ ಹನುಮಂತವಾಗಬೇಕು.

## ಸಿದ್ಧರಾಮನ ವಚನಗಳು

ಒಬ್ಬರ ಮನವ ನೋಯಿಸಿ,
ಒಬ್ಬರ ಮನೆಯ ಘಾತವ ಮಾಡಿ,
ಚಂದ್ರನು ಗಂಗೆಯ ತಡಿಯಲ್ಲಿದ್ದರೇನು
ಕಲಂಕ ಬಿಡದಾಯಿತ್ತಯ್ಯ
ಅದು ಕಾರಣ, ಮನವ ನೋಯಿಸದವನೇ,
ಘಾತವ ಮಾಡದವನೇ ಪರಮ ಪಾವನ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ.



ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ
ಭಾರತವೆಂದಡೆ ಭರತದೇಶದಲ್ಲಿ ಜನಿಸಿ,
ಕಾಮಿನಿಯರ ಸೋಗುಹಾಕಿ,
ಆ ದೇಶಕ್ಕಧಿಯಾದ ಕಥೆಯೆ ಭಾರತವಯ್ಯಾ.
ರಾಮಾಯಣವೆಂದಡೆ ಆದಿನಾರಾಯಣನು
ಪೃಥ್ವಿಯೊಳು ಪುಟ್ಟಿ,
ರಾಮನೆಂಬಭಿದಾನವ ಧರಿಸಿ, ಸರ್ವರಂತೆ
ಪ್ರಪಂಚವ ಮಾಡಿ
ರಾಕ್ಷಸರ ಗರ್ವವನಳಿದುದೆ ರಾಮಾಯಣ
ಮಾಡಿ ಉದ್ಧಟವಾದಲ್ಲಿ ಕಾಲಾಂತರದಲಾದರೂ
ಕುರುಹಿನೊಳಗಾದವಯ್ಯಾ.
ಕಪಿಲಸಿದ್ಧ ಮಲ್ಲಿಕಾರ್ಜುನಾ.



ಜ್ಞಾನಿಗಳು ತಾವಾದ ಬಳಿಕ ಅನ್ಯರ ಸ್ತೋತ್ರಕ್ಕೆ
ಒಳಗಾಗಬಾರದು
ಜ್ಞಾನಿಗಳು ತಾವಾದ ಬಳಿಕ ಗುರುಹಿರಿಯರಿಗಂಜಿ
ನಡೆಯಬೇಕು
ಜ್ಞಾನಿಗಳು ತಾವಾದ ಬಳಿಕ ಅನ್ಯಸ್ತ್ರೀ ತನ್ನ
ಮಾತೆಯಂತಿರಬೇಕು
ಕಪಿಲಸಿದ್ಧ ಮಲ್ಲಿಕಾರ್ಜುನಾ.







# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)

- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

### ೭ ಅಚ್ಯುತರ್

**ಚೋ**ಳ ರಾಜ್ಯದಲ್ಲಿ ತಿರುಚೆನ್ನಾಡು ಎಂಬ ಒಂದು ಪಟ್ಟಣ. ಶಿವಭಕ್ತ ದಂಪತಿಗಳಿಗೆ ಅಚ್ಯುತ ಎಂಬ ಮಗನಿದ್ದ. ಆತನಿಗೆ ಐದು ವರ್ಷವಾಗುತ್ತಿದ್ದಂತೆಯೇ ಅಕ್ಷರಾಭ್ಯಾಸ ಆರಂಭವಾಯಿತು. ಮದುವೆ ಆಯಿತು. ಆತ ತನ್ನ ಆಶ್ರಮದಲ್ಲಿ ಬೇಡುವವರಿಗೆ ಏನಾದರೂ ಕೊಡುವ ತ್ಯಾಗಿಯಾಗಿದ್ದ. ಹರಗುರುಚರ ಮೂರ್ತಿಗಳು ಸಂತೃಪ್ತಿಪಟ್ಟು ಹೋಗುತ್ತಿದ್ದರು. ಆತನಿಗೆ ಜೂಜಿನಲ್ಲೇ ಹಣ ಬರುತ್ತಿತ್ತು. ಆದರೂ ಕೆಲವರು ಪ್ರಶ್ನಿಸುತ್ತಿದ್ದರು.

"ಈ ಜೂಜಾಡುವುದು ತಪ್ಪಲ್ಲವೇ?" ಎಂದು ಆದಕ್ಕೆ ಆತನ ಉತ್ತರ :- "ಅದನ್ನು ಹರ ಗುರು ಚರ ಮೂರ್ತಿಗಳಿಗೆ ವಿನಿಯೋಗಿಸುವೆ. ಇದರಿಂದ ದೋಷವಿಲ್ಲವೆಂದು ನಾನಾದರೂ ಭಾವಿಸಿರುವೆ " ಅಚ್ಯುತ ಜೂಜಾಟದಲ್ಲಿ ಪರಿಣಿತ. ಯಾರಾದರೂ ಸೋತು ಹಣ ಕೊಡದಿದ್ದರೆ ಇರಿದು ಸಾಯಿಸುತ್ತಿದ್ದ. ಏಕೆಂದರೆ ಅದು ಜಂಗಮರಿಗೆ ಸೇರಬೇಕಾದ ಹಣ ಎಂದು. ಬೇರಿಗೆ ನೀರೆರೆದರೆ ಮರ ಚಿಗುರುವಂತೆ, ಜಂಗಮ ತೃಪ್ತಿಯೇ ಶಿವನ ತೃಪ್ತಿ ಎಂದು ಭಾವಿಸಿ ಹಾಗೆ ಮಾಡುತ್ತಿದ್ದ. ಜಂಗಮರಿಗೆ ಸೇರಬೇಕಾದ ಹಣ ತರದಿದ್ದರೆ ಕೊಂದರೂ ಪಾಪವಿಲ್ಲವೆಂದು ನಂಬಿ ಈ ವ್ರತವನ್ನು ಪರಿಪಾಲಿಸುತ್ತಿದ್ದ. ಯಾವಾಗಲೂ ಈತನಿಗೆ ಜಯವು ಕಟ್ಟಿಟ್ಟ ಬುತ್ತಿಯಾಗಿತ್ತು. ತನ್ನ ವ್ರತಕ್ಕೆ ಎಂದೂ ಭಂಗ ತಂದುಕೊಳ್ಳದೆ ನಿರ್ವಹಿಸುತ್ತಿದ್ದ. ಈ ವಿಷಯ ಕೈಲಾಸಕ್ಕೂ ತಲುಪಿತು. ಶಿವನು ಈತನನ್ನು ಪರೀಕ್ಷಿಸಲು ವೇಷ ಮರೆಸಿಕೊಂಡು ಬಂದು, ಜೂಜಾಡಿ ದ್ರವ್ಯವನ್ನೆಲ್ಲಾ ಕಳೆದುಕೊಂಡು ಓಡುವ ಪ್ರಯತ್ನ ಮಾಡಿದ. "ಎಲ್ಲಿಗೆ ಓಡುವೆ ನಿಲ್ಲು" ಎಂದು ಆತನನ್ನು ಹಿಡಿದು ಚೂರಿಯಿಂದ ಇರಿಯಲೆತ್ನಿಸಲು ಶಿವನು ತನ್ನ ನಿಜರೂಪ ತೋರಿ, "ನೀನು ಮಹಾ ಚತುರ " ಎಂದ. ಶಿವನ ರೂಪ ನೋಡಿ, "ನಾನು ಮಾಡಿದ ಅಪರಾಧವನ್ನು ಮನ್ನಿಸು ದೇವಾ " ಎಂದು ಅಡಿದಾವರೆಗೆರಗಿದ.

"ನಾನು ಜೂಜುಗಾರನೆಂದು ಏನೇನೋ ಮಾತನಾಡಿದೆ"

"ನಿನ್ನ ಭಕ್ತಿಗೆ ಮೆಚ್ಚಿದೆ. ನಿನ್ನ ವ್ರತ ದೊಡ್ಡದು. ನೀನು ವ್ರತಭಂಗ ಮಾಡುವವರಿಗೆ ಯಾರಾದರೂ ಬಿಡೆ ಎಂಬುದು ಇಂದು ಅರಿವಾಯಿತು" ಎಂದು ನಾನಾವಿಧವಾಗಿ ಸಂತೈಸಿ ಆತನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತ.

### ೮ ಮೊನೆಯಾಂಡರು

ಚೋಳ ರಾಜ್ಯದಲ್ಲಿ ತಿರುನಾವಲ್ಲೂರ ಎಂಬುದು ಒಂದು ಪ್ರಸಿದ್ಧವಾದ ಪಟ್ಟಣ. ಅಲ್ಲಿನ ಅರಸ ಪಗಲ್ಪೋಳ ನರಸಿಂಗ ಮೊನೆಯಾಂಡರು ವೀರಭಕ್ತ. ಶಿವಭಕ್ತರನ್ನು ದೇವರೆಂದು ಪೂಜಿಸುತ್ತಿದ್ದ. ಆತ ವಿಭೂತಿ, ರುದ್ರಾಕ್ಷಿ ಇಲ್ಲದ ಭವಿಯ ಕತ್ತನ್ನು ಕತ್ತರಿಸುತ್ತಿದ್ದ. ಯಾರು ಸಹಸ್ರ ಹೊನ್ನು ಕೊಡುವರೋ, ಅವರ ವಿರೋಧಿ ಭವಿಗಳನ್ನು ನಾಶಮಾಡುತ್ತಿದ್ದ. ಶಿವಾರ್ಚನೆ ಮಾಡಿ ಅರಮನೆಗೆ ಬಂದು ಶಿವಪುರಾಣ ಪಠಿಸುತ್ತಿದ್ದ. ಬೇಡಿದವರಿಗೆ ಬೇಕಾದುದನ್ನು ಕೊಡುತ್ತಿದ್ದ. ಮಿತ ಆಹಾರ ಸೇವನೆ, ವ್ಯಾಯಾಮ ಮಾಡುತ್ತಿದ್ದ. ಒಮ್ಮೆ ಆ ಪಟ್ಟಣದ ಅರಸು ಪಗಲ್ಪೋಳನನ್ನು ಕಾಣುವ ತವಕದಿಂದ ಕುದುರೆ ಏರಿ ಬಂದು ರಾಜನನ್ನು ಕಂಡ. ರಾಜ ಆತನನ್ನು ಪ್ರಶ್ನಿಸಿದ - " ಯಾರು ನೀವು"? ಬಂದ ಕಾರಣ"

"ನನ್ನ ಹೆಸರು ಮೊನೆಯಾಂಡರೆಂದು, ಭವಿಜನ ವಿಧ್ವಂಸಕವೇ ನನ್ನ ವ್ರತ" ಎಂದು ಪಡಿ ನುಡಿದ.

"ಒಳ್ಳೆಯದೇ ಆಯಿತು, ನೀನು ಇಲ್ಲೇ ಇದ್ದು ಬಿಡು. ನಿನ್ನ ವ್ರತವನ್ನು ಆಚರಿಸು"

"ಅಂದರೆ?"

"ಮೊನೆಯಾಂಡರೇ, ಪಾಂಡ್ಯರಾಜ ಕೊಡುವ ಕಪ್ಪ ಕೊಡದೆ ನಗರಕ್ಕೆ ಮುತ್ತಿಗೆ ಹಾಕಿರುವನು ಆತನ ಧ್ವಂಸ ಮಾಡಿ ಬಾ"

"ಅಪ್ಪಣೆ ಮಹಾರಾಜ"

ಎಂದು ಹೇಳಿ ಶತ್ರು ಸೈನ್ಯವನ್ನು ನಾಶ ಮಾಡಲು ಹೊರಟ. ಸೈನ್ಯದಲ್ಲಿನ ಶಿವಭಕ್ತರನ್ನು ಬಿಟ್ಟು ಬೇರೆ ಭವಿಗಳನ್ನು ಧ್ವಂಸ

ಮಾಡುತ್ತಿದ್ದ. ಶಿವನು ಸೈನ್ಯದಲ್ಲಿ ಶಿವಭಕ್ತನ ವೇಷದಿಂ ಬಂದು ಆತನ ರೌದ್ರತೆಯನ್ನು ನೋಡಿ ಬೆರಗಾದ.

ಆತನನ್ನುದ್ದೇಶಿಸಿ, "ಮೊನೆಯಾಂಡರೇ ನನ್ನೊಡನೆ ಯುದ್ಧ ಮಾಡಿ" ಎನ್ನಲು ಖಡ್ಗ ಎಸೆದು ನಿಂತ. ಶಿವ ಭಕ್ತನ ಹೊಡೆತದ ಬಾಧೆಯನ್ನು ಸಹಿಸಿಕೊಂಡು "ಎನ್ನ ದೇಹ ಶಿವಾರ್ಪಿತ" ಎಂದು ಹಾಗೆಯೇ ನಿಂತ. ಆಗ ಶಿವನು ತನ್ನ ನಿಜರೂಪ ತೋರಿ ನಿನ್ನ ವೀರತನ, ವ್ರತಕ್ಕೆ ಮೆಚ್ಚಿದೆ ಎಂದು ಕೈಲಾಸಕ್ಕೆ ಕರೆದೊಯ್ದ.

ಮತ್ತೊಂದು ಪ್ರಚಲಿತ ಕಥೆ ಹೀಗಿದೆ : ಚೋಳ ಮಂಡಲದ ಅರಸು ನರಸಿಂಹ ಮೊನೆಯಾಂಡರು ಶಿವಭಕ್ತರ ಕಂಡರೆ ಅಪಾರ ಭಕ್ತಿ. ಶಿವನು ಈತನ ಪರೀಕ್ಷಿಸಲು ಜಂಗಮನಾಗಿ ಬಂದು, ನನಗೆ ಹಣದ ಕೊರತೆ ಇದೆ ಎಂದು; ನಿನ್ನ ಭಂಡಾರದ ಹಣವನ್ನೆಲ್ಲಾ ಕೊಡು ಎಂದು ಕೇಳಿದ. ಆಗ ಆತ ಎಲ್ಲವನ್ನೂ ದಾನನೀಡಿದ. ಆಗ ಶಿವನು ತನ್ನ ಪ್ರತ್ಯಕ್ಷ ರೂಪ ತೋರಿ, ಆತನನ್ನು ಕೆಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು.

## ೯. ಮಾನ ಕಂಜರರು

ಚೋಳರಾಜ್ಯದ ಕಂಜರಾಪುರದಲ್ಲಿ ಮಾನಕಂಜರರ್ ಎಂಬುವರು ಮಹಾ ಶಿವಭಕ್ತ. ದಾನ ಶಿಖಾಮಣಿ. ಏನು ಬೇಡಿದರೂ ಕೊಡುವವನೆಂದು ಖ್ಯಾತಿ ಪಡೆದಿದ್ದ. ಆತನ ಹೆಂಡತಿ ಗುಣವತಿ. ಗಂಡನೊಡನೆ ಸಾಮರಸ್ಯವಾಗಿ ಬಾಳ್ವೆ ನಡೆಸುತ್ತಿದ್ದ ಭಕ್ತೆ. ಸಕಲ ಸದ್ಗುಣ ಸಂಪನ್ನೆ. ಇಷ್ಟಾದರೂ ಗುಣವತಿ ಒಳಗೊಳಗೆ ಕೊರಗುತ್ತಿದ್ದಳು. ಗಂಡ ಇದನ್ನು ಗಮನಿಸಿ,

"ಗುಣವತಿ ನಿನ್ನ ದುಗುಡಕ್ಕೆ ಕಾರಣವೇನು?" ಎಂದು ಕೇಳಿದ. ಅದಕ್ಕೆ ಆಕೆ, "ನಮಗೆ ಇನ್ನೂ ಮಕ್ಕಳಾಗಲಿಲ್ಲ. ಜನರು ಬಂಜೆ ಎಂದು ಆಡಿಕೊಳ್ಳುತ್ತಾರೆ. ನಾನು ಇದ್ದು ತಾನೆ ಏನು ಪ್ರಯೋಜನ?" ಎಂದು ತನ್ನ ಮನದ ದುಗುಡವನ್ನು ತೋಡಿಕೊಂಡಳು.

"ಇದಕ್ಕೇಕೆ ದುಃಖ ಪಡುತ್ತೀಯೇ...ಬಾ...ಎಂದು ತನ್ನ ಆರಾಧ್ಯ ದೇವರಾದ ಕಂಜದಪುರಾಧೀಶ್ವರನಲ್ಲಿಗೆ ಕರೆತಂದು ಆತನನ್ನು ಪೂಜಿಸಿ ವ್ರತಗೈಯುವಂತೆ ಹೇಳಿದ. ಶಿವನನ್ನು ಮೆಚ್ಚಿಸಿದ. ಶಿವ "ನಿನಗೆ ಏನು ವರ ಬೇಕು?" ಎಂದು ಕೇಳಿದ. "ನಮಗೆ ಒಬ್ಬಳು ಕುವರಿಯನ್ನು ಕರುಣಿಸು ದೇವಾ" ಎಂದು ಬೇಡಿದ. ಅದಕ್ಕೆ ಶಿವ "ತಥಾಸ್ತು"

ಕೆಲವು ದಿನಗಳಲ್ಲಿಯೇ ಹೆಣ್ಣುಮಗುವಿಗೆ ಗುಣವತಿ ಜನ್ಮವಿತ್ತಳು. (ತಿರುಮುಡಿಯೊಡಯಳು, ಚಾದ್ರಮತಿ ಎಂಬುದೂ ಕೆಲವೆಡೆ ಬರುತ್ತದೆ ) ಮಗುವಿಗೆ ಸೋಮಪ್ರಭೆ ಎಂದು ಹೆಸರಿಟ್ಟರು. ಮಗು ಬೆಳೆಯುತ್ತಾ ದೊಡ್ಡದಾಯಿತು. ಈ ಸುಂದರಿ ವಿದ್ಯಾವಂತೆ. ಜಂಗಮಾರಾಧನೆಯನ್ನು ಮಾಡುವಂತಾದಳು.

ಸೋಮಪ್ರಭೆಗೆ ವಿಕ್ರಮ ಚೋಳ ರಾಜನ ಮಗನಾದ ಪಗ ಲ್ಕೋಳನೊಂದಿಗೆ ವಿವಾಹ ನಿಶ್ಚಯವಾಯಿತು. ಮದುವೆಯ ಸಂದರ್ಭದಲ್ಲಿ ಶಿವನು ಮಾನಕಂಜರನ್ನು ಪರೀಕ್ಷೆ ಮಾಡುವ ಆಸೆಯಾಯಿತು. ಶಿವ ವೃದ್ಧ ಜಂಗಮನ ವೇಷ ಧರಿಸಿಕೊಂಡು ಬಂದು ಆತನನ್ನು ನೋಡಿದ. ಮಾನಕಂಜರರು ಕೇಳಿದರು "ಏನು ಬೇಕು?" ಎಂದು.

ಸೋಮಪ್ರಭೆಯ ಅಲಂಕೃತ ಕೂದಲನ್ನು ನೋಡಿ ಹೇಳಿದ, "ನಿನ್ನ ರಾಜ್ಯ ಬೇಡ, ಕೋಶ ಬೇಡ, ಏನೂ ಬೇಡವಪ್ಪಾ, ನನಗೇಕೋ ಪಾದುಕೆ ಒತ್ತುತ್ತಿದೆ. ಸೋಮಪ್ರಭೆಯ ಕೂದಲನ್ನು ಕತ್ತರಿಸಿಕೊಡುತ್ತೀಯಾ"? ಎನ್ನಲು ಮಾನಕಂಜರರು ಮರು ಮಾತನಾಡದೆ ಕತ್ತರಿಸಿ ಪಾದಕ್ಕಿಟ್ಟರು. ಜಂಗಮರ ಅಭೀಷ್ಟೆ ಪೂರೈಸಿದರು. ಜನರೆಲ್ಲಾ ಕೋಪಗೊಂಡರು. ಇಬ್ಬರ ವರ್ತನೆಯನ್ನು ನೋಡಿ ಆತನ ತ್ಯಾಗಕ್ಕೆ ಮೆಚ್ಚಿ ಜಂಗಮ ತನ್ನ ನಿಜ ಶಿವ ಸ್ವರೂಪವನ್ನು ತೋರಿ ಸೋಮಪ್ರಭೆಯ ಕೂದಲು ಮೊದಲಿದ್ದಂತೆ ಮಾಡಿ, ಮಾನಂಕಜರರನ್ನು ಕೈಲಾಸಕ್ಕೆ ಒಯ್ದು ಶಿವಗಣ ಪದವಿಯನ್ನಿತ್ತ.

ಮತ್ತೊಂದು ಪಾಠಾಂತರದ ಕಥೆ ಹೀಗಿದೆ: ಶಿವನು ಪರೀಕ್ಷಿಸಲು ಭವಿ ಸೈನ್ಯದ ಸಮೂಹದಲ್ಲಿ ತಾನೇ ಸೇರಿ ಯುದ್ಧವೀರನಾಗಿ ನಟಿಸಿದ. ಈತನ ರುಂಡವನ್ನು ಕತ್ತರಿಸಿ, ಕಪ್ಪ ಕಾಣಿಕೆಗಳೊಡನೆ ಮೂವತ್ತು ಗಾಡಿ ರುಂಡಗಳನ್ನು ತಂದು ರಾಜನ ಮುಂದೆ ಸುರಿದ. ಇದರಲ್ಲಿ ಶಿವಭಕ್ತನ ರುಂಡ ನೋಡಿ ರಾಜನಿಗೆ ಚಿಂತೆಯಾಯಿತು. ನಾನಾದರೂ ಏಕೆ ಈ ರೀತಿ ಪ್ರಕಟಿಸಿದೆ? ಎಂಥ ಮಹಾಪರಾಧ ವಾಯಿತು.? ಜಂಗಮನ ಕೊಲೆಯಾಯಿತು. ಈ ತಪ್ಪಿಗೆ ನಾನೇ ಹೊಣೆ. ಇದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದರೆ ನನ್ನ ತಲೆಯನ್ನೇ ಕತ್ತರಿಸಿಕೊಳ್ಳಬೇಕು. ಶಿವಲಾಂಛನ ನೋಡದೆ ಈ ಜಂಗಮನ ರುಂಡವನ್ನು ಕತ್ತರಿಸಿದ್ದಾರೆ ಎಂದು ಹೇಳಿ ಆ ರುಂಡವನ್ನು ತೆಗೆದುಕೊಂಡು ಸಿಂಹಾಸನದ ಮೇಲಿರಿಸಿ, ಪೂಜಿಸಿ, ತನ್ನ ತಲೆಯನ್ನು ಕತ್ತರಿಸಬೇಕೆಂದು ಕತ್ತಿಯನ್ನು ಮೇಲೆತ್ತಲು ಶಿವನು ಪ್ರತ್ಯಕ್ಷನಾಗಿ ನಿಲ್ಲು ಎಂದು ಆತನ ಶಿರವನ್ನು ಮುಂಡಕ್ಕೆ ಜೋಡಿಸಿದ. ಆಗ ರಾಜನಿಗಾಗ ಸಂತೋಷ ಅಷ್ಟಿಷ್ಟಲ್ಲ. ಅಷ್ಟರಲ್ಲಿ ಮಾನಕಂಜರನ ಪುತ್ರಿ ಸೋಮ ಪ್ರಭೆಯೂ ಬಂದು ನಮಸ್ಕರಿಸಿದಳು, ಈಶ್ವರ ಇಬ್ಬರಿಗೂ ಶಿವ ಪದವಿಯನ್ನು ಕರುಣಿಸಿದನು.

(ಮುಂದುವರಯುವುದು)





# ಫೆಬ್ರವರಿ ತಿಂಗಳ ಕೃಷಿ ಕಾರ್ಯಕ್ರಮಗಳು

- ಡಾ. ಕೆ.ಎನ್. ವೆಂಕಟೇಶಮೂರ್ತಿ,
ಕೃಷಿ ಅಧಿಕಾರಿ, ಜಲಾನಯನ ಅಭಿವೃದ್ಧಿ ಯೋಜನೆ,
ಉಡುಪಿ-576101

**ಬೇಸಿಗೆ ಬತ್ತ** : ಸಸಿಮಡಿಯಲ್ಲಿ ಬೀಜ ಬಿತ್ತಿದ ೧೨ ದಿನಗಳ ನಂತರ ೨೦ ಮಿ.ಲಿ. ಕ್ವಿನಾಲ್‌ಫಾಸ್ ಅಥವಾ ೧೫ ಮಿ.ಲಿ. ಮಾನೋಕ್ರೋಟೋಫಾಸ್ ಮತ್ತು ೧೦ ಮಿ.ಲಿ. ಹಿನೋಸಾನ್ ಅಥವಾ ೧೦ ಗ್ರಾಂ ಡೈಥೇನ್ ಎಮ್. ೪೫ನ್ನು ೧೦ ಲೀಟರ್ ನೀರಿನಲ್ಲಿ ಬೆಳೆಸಿ ಸಿಂಪರಿಸಿ.

ನಾಟಿ ಸಮಯದಲ್ಲಿ ಎಕರೆಗೆ ೧೨೫ ಕೆ.ಜಿ ಅಮೋನಿಯಂ ಸಲ್ಫೇಟ್, ೧೩೦ ಕೆ.ಜಿ. ಸೂಪರ್ ಫಾಸ್ಫೇಟ್ ಹಾಗೂ ೪೦ ಕೆ.ಜಿ. ಮ್ಯೂರೇಟ್ ಆಫ್ ಪೊಟಾಷ್ ರಸಗೊಬ್ಬರಗಳನ್ನು ಅಥವಾ ಎಕರೆಗೆ ೧೫೦ ಕೆ.ಜಿ. ೧೭: ೧೭: ೧೭ ಸಂಯುಕ್ತ ರಾಸಾಯನಿಕ ಗೊಬ್ಬರಗಳನ್ನು ಗದ್ದೆಯಲ್ಲಿ ಸಮನಾಗಿ ಎರಚಿ.

ನಾಟಿಮಾಡಲು ೨೦-೨೫ ದಿನಗಳ ವಯಸ್ಸಿನ ಪೈರನ್ನೆ ಬಳಸಿ. ದೀರ್ಘಾವಧಿ ತಳಿಯಾದಲ್ಲಿ ೮ ಅಂಗುಲ ಅಂತರದ ಸಾಲುಗಳಲ್ಲಿ ಪೈರಿನಿಂದ ಪೈರಿಗೆ ೪ ಅಂಗುಲ ಅಂತರವಿರುವಂತೆ ಅಥವಾ ಪ್ರತಿ ಚದರ ಮೀಟರ್ ಪ್ರದೇಶದಲ್ಲಿ ೫೫ ಗುಳಿಗಳು ಬರುವಂತೆ ಪ್ರತಿ ಗುಳಿಯಲ್ಲಿ ೨ ರಿಂದ ೩ ಸಸಿಗಳನ್ನು ತೇಲಿಸಿ ನಾಟಿ ಮಾಡಿ ಅಲ್ಪಾವಧಿ ತಳಿಗಳಾದಲ್ಲಿ ಸಾಲಿನಿಂದ ಸಾಲಿಗೆ ೬ ಅಂಗುಲ ಪೈರಿನಿಂದ ಪೈರಿಗೆ ೪ ಅಂಗುಲ ಇರುವಂತೆ ಅಥವಾ ಪ್ರತಿ ಚದರ ಮೀಟರ್‌ಗೆ ೬೫ ರಿಂದ ೬೭ ಗುಳಿಗಳು ಬರುವಂತೆ ಪ್ರತಿ ಗುಳಿಯಲ್ಲೂ ೨-೩ ಸಸಿಗಳನ್ನು ತೇಲಿಸಿ ನಾಟಿಮಾಡಬೇಕು. ಹೈಬ್ರಿಡ್ ಬತ್ತದ ತಳಿಯಾದಲ್ಲಿ ಪ್ರತಿಗುಳಿಗೆ ೧ ಸಸಿಯಂತೆ ೬ ಅಂಗುಲ ಅಂತರದ ಸಾಲುಗಳಲ್ಲಿ ಪೈರಿನಿಂದ ಪೈರಿಗೆ ೪ ಅಂಗುಲ ಅಂತರವಿರುವಂತೆ ನಾಟಿ ಮಾಡಬೇಕು. ನಾಟಿ ಮಾಡುವ ಮೊದಲು ಎಕರೆಗೆ ೬ರಿಂದ ೮ ಕೆ.ಜಿ. ಸತುವಿನ ಸಲ್ಫೇಟ್‌ನ್ನು ಮಣ್ಣಿನಲ್ಲಿ ಸೇರಿಸಬೇಕು.

ರಾಸಾಯನಿಕ ಕಳೆ ನಾಶಕಗಳನ್ನು ಬಳಸಿ ಕಳೆಗಳನ್ನು ನಿಯಂತ್ರಿಸುವುದಾದಲ್ಲಿ ನಾಟಿಯಾದ ೫ ರಿಂದ ೬ ದಿನಗಳೊಳಗೆ ಎಕರೆಗೆ ೪ ಕೆ.ಜಿ. ಬ್ಯೂಟಾ ಕ್ಲೋರ್ ಮತ್ತು ೪ ಕೆ.ಜಿ. ೨-೪-ಡಿ ಮಿಶ್ರಣವನ್ನು ಗದ್ದೆಯಲ್ಲಿ ಸಮನಾಗಿ ಎರಚಬೇಕು. ಅಥವಾ ೧/೨ ಲೀಟರ್ ಅನಿಲೋಫಾಸನ್ನು ೩೦೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪಡಿಸಬೇಕು. ಸಿಂಪಡಿಸಿದ ೪೮ ಗಂಟೆಗಳ ತರುವಾಯವೇ ಗದ್ದೆಗೆ ನೀರು ಹಾಯಿಸಬೇಕು. ನಾಟಿಯಾದ ೨೫-೩೦ ದಿನಗಳ ಬೆಳೆಗೆ ಮೊದಲ ಕಂತು ಮೇಲುಗೊಬ್ಬರ ಯೂರಿಯಾವನ್ನು ಗದ್ದೆಯಲ್ಲಿ ಎರಚಬೇಕು. ನಾಟಿ ಮಾಡಿದ ೧೦ ದಿನಗಳವರೆಗೆ ೧ ಅಂಗುಲಕ್ಕೆ ಮೀರದಂತೆ ಗದ್ದೆಯಲ್ಲಿ ನೀರು ನಿಲ್ಲಿಸಬೇಕು. ನಂತರದ ದಿನಗಳಲ್ಲಿ ೨ ಅಂಗುಲಕ್ಕೆ ನೀರಿನ ಮಟ್ಟವನ್ನು ಹೆಚ್ಚಿಸಬೇಕು.

## ಹೈಬ್ರಿಡ್ ಜೋಳ

ಹೈಬ್ರಿಡ್ ಜೋಳದ ಬಿತ್ತನೆಯುನ್ನು ಫೆಬ್ರವರಿ ಅಂತ್ಯದವರೆಗೂ ಮುಂದುವರಿಸಬಹುದು. ನೀರಾವರಿ ಆಶ್ರಯದಲ್ಲಿ ಬೆಳೆದುಕೊಳ್ಳಬಹುದಾದ ತಳಿಗಳೆಂದರೆ, ರಾಜ್ಯದ ಉತ್ತರ ಜಿಲ್ಲೆಗಳಲ್ಲಿ ೧೦೫ ದಿನಗಳಲ್ಲಿ ಕುಯಿಲಿಗೆ ಬರುವ ಸಿ.ಎಸ್. ಹೆಚ್. -೧ ೧೧೫ ದಿನಗಳ ಸಿ.ಎಸ್.ಹೆಚ್.-೫, ೧೨೦ ದಿನಗಳ - ಸಿ.ಎಸ್.ಹೆಚ್. ೧೦ ಅಥವಾ ಸಿ.ಎಸ್. ಹೆಚ್-೧೧ ಅಥವಾ ಸುಧಾರಿತ ತಳಿಯಾದ ೧೨೦ ದಿನಗಳಲ್ಲಿ ಕುಯಿಲಿಗೆ ಬರುವ ಸಿಎಸ್.ವಿ-೪ ತಳಿಯನ್ನಾದರೂ ಬೆಳೆದುಕೊಳ್ಳಬಹುದು. ದಕ್ಷಿಣ ಜಿಲ್ಲೆಗೆ ಶಿಫಾರಸ್ಸು ಮಾಡಿರುವ ತಳಿಗಳೆಂದರೆ ಸಿ.ಎಸ್.ಹೆಚ್.- ೫ ಹಾಗೂ ಸಿಎಸ್.ಹೆಚ್.-೯

ಒಂದು ಎಕರೆ ಪ್ರದೇಶಕ್ಕೆ ಬಿತ್ತನೆ ಮಾಡಲು ೩ ಕೆ.ಜಿ. ದೃಢೀಕರಿಸಿದ ಬೀಜ ಬೇಕಾಗುತ್ತದೆ. ಬಿತ್ತನೆಗೆ ಮೊದಲು ಎಕರೆಗೆ ೧೦೦ ಕೆ.ಜಿ. ಅಮೋನಿಯಂ ಸಲ್ಫೇಟ್, ೧೯೦ ಕೆ.ಜಿ. ಸೂಪರ್ ಫಾಸ್ಫೇಟ್ ಹಾಗೂ ೨೫ ಕೆ.ಜಿ. ಮ್ಯೂರೇಟ್ ಆಫ್ ಪೊಟ್ಯಾಷ್ ರಸಗೊಬ್ಬರಗಳನ್ನು ಮಣ್ಣಿನಲ್ಲಿ ಬೆರೆಸಿ, ೧೫ ಅಂಗುಲ ಅಂತರದ ಸಾಲುಗಳಲ್ಲಿ ಬೀಜದಿಂದ ಬೀಜಕ್ಕೆ ೪ ಅಂಗುಲ ಅಂತರ ಇರುವಂತೆ ಬಿತ್ತನೆಯನ್ನು ಕೈಗೊಳ್ಳಬೇಕು. ಬಿತ್ತಿದ ೪ ವಾರಗಳ ನಂತರ ೪೫ ಕೆ.ಜಿ. ಯೂರಿಯಾವನ್ನು ಮೇಲುಗೊಬ್ಬರವಾಗಿ ಕೊಟ್ಟು ಮಣ್ಣು ಏರುಹಾಕಬೇಕು. ಬಿತ್ತನೆ ಸಮಯದಲ್ಲಿ ಬಿತ್ತಿದ ೨೦ ದಿವಸಗಳಲ್ಲಿ, ೩೫ ದಿವಸಗಳಲ್ಲಿ ಆನಂತರ ಪ್ರತಿ ೧೦ ದಿವಸಗಳಿಗೊಮ್ಮೆ ನೀರು ಹಾಯಿಸಬೇಕಾಗುತ್ತದೆ. ಮುಖ್ಯವಾಗಿ ಬೀಜಮೊಳೆಯುವಾಗ, ಬೆಳವಣಿಗೆ ಸಮಯಲ್ಲಿ ತೆನೆ ಬರುವ ಸಮಯದಲ್ಲಿ ಮತ್ತು ಕಾಳು ತುಂಬುವಾಗ ನೀರಿನ ಕೊರತೆಯಾಗದಂತೆ ನೋಡಿಕೊಳ್ಳಬೇಕು. ಬುಡದಿಂದ ಬರುವ

ಕವಲುಗಳನ್ನು ತಪ್ಪದೆ ತೆಗೆಯುತ್ತಿರಬೇಕು.

ಬಿತ್ತಿದ ೨೫ ಮತ್ತು ೪೫ ದಿವಸಗಳ ನಂತರ ೨೦ ಮಿಲಿ ಎಂಡೋಸಲ್ಫಾನ್ ಮತ್ತು ೨೦ ಗ್ರಾಂ ಡೈಥೈನ್ ಎಂ-೪೫ನ್ನು ೧೦ ಲೀಟರ್ ನೀರಿನಲ್ಲಿ ಕರಗಿಸಿ ಸಿಂಪರಿಸಿ. ಇದರಿಂದ ಕಾಂಡ ಕೊರೆಯುವ ಹುಳು ಹಾಗೂ ಕೆಲವು ರೋಗಗಳನ್ನು ತಡೆಗಟ್ಟಬಹುದು.

**ಶಕ್ತಿಮಾನ್ ಮುಸುಕಿನ ಜೋಳ**

ಬಿತ್ತನೆಯನ್ನು ಫೆಬ್ರವರಿ ಅಂತ್ಯದವರೆಗೂ ಮುಂದುವರಿಸಬಹುದು. ಒಂದು ಎಕರೆ ಪ್ರದೇಶಕ್ಕೆ ಬಿತ್ತನೆ ಮಾಡಲು ೬ ಕೆ.ಜಿ. ಪರಿಷ್ಕೃತ ಬಿತ್ತನೆ ಬೀಜ ಬೇಕಾಗುತ್ತದೆ. ಬೀಜವನ್ನು ೨ ಅಡಿ ಅಂತರದ ಸಾಲುಗಳಲ್ಲಿ ಬೀಜದಿಂದ ಬೀಜಕ್ಕೆ ೧ ಅಡಿ ಅಂತರ ವಿರುವಂತೆ ೧ ಅಂಗುಲಕ್ಕಿಂತಲೂ ಹೆಚ್ಚು ಆಳಕ್ಕೆ ಬೀಳದಂತೆ ಬಿತ್ತಿ. ಬಿತ್ತುವ ಸಮಯದಲ್ಲಿ ಎಕರೆಗೆ ೧೦೦ ಕೆ.ಜಿ. ಅಮೋನಿಯಂ ಸಲ್ಫೇಟ್ ೧೯೦ ಕೆ.ಜಿ. ಸೂಪರ್ ಫಾಸ್ಪೇಟ್ ಮತ್ತು ೨೬ ಕೆ.ಜಿ. ಮ್ಯೂಕೇಟ್ ಆಫ್ ಪೊಟ್ಯಾಷ್ ರಸಗೊಬ್ಬರಗಳನ್ನು ಕೊಡಿ. ಬಿತ್ತಿದ ೪ ವಾರಗಳ ನಂತರ ಮೊದಲ ಕಂತಿನ ಮೇಲುಗೊಬ್ಬರವಾಗಿ ೪೫ ಕೆ.ಜಿ.ಯೂರಿಯಾವನ್ನು ೭ ವಾರಗಳ ನಂತರ ಎರಡನೇ ಕಂತಿನ ಮೇಲುಗೊಬ್ಬರವಾಗಿ ಪುನಃ ೪೫ ಕೆ.ಜಿ. ಯೂರಿಯಾವನ್ನು ಕೊಟ್ಟು ಮಣ್ಣು ಏರುಹಾಕಿ. ಅವಶ್ಯಕತೆ ಇದ್ದಲ್ಲಿ ಬಿತ್ತನೆ ಸಮಯದಲ್ಲಿ ಎಕರೆಗೆ ೪-೫ ಕೆ.ಜಿ. ಸತುವಿನ ಸಲ್ಫೇಟನ್ನು ಮಣ್ಣಿನಲ್ಲಿ ಬೆರೆಸಿ. ಬೀಜ ಮೊಳೆಯುವ ಸಮಯ ಮತ್ತು ಕಾಳು ಕಟ್ಟುವ ಸಮಯಗಳಲ್ಲಿ ಸಾಕಷ್ಟು ನೀರು ಹಾಯಿಸಿ ಕಾಳು ಕಟ್ಟುವ ಸಮಯದಲ್ಲಿ ತುದಿ ಮುರಿಯಬೇಡಿ. ಮುರಿದರೆ ಇಳುವರಿ ಕಡಿಮೆಯಾಗುತ್ತದೆ.

ರಸಹೀರುವ ಕೀಟಗಳು ಕಂಡು ಬಂದಲ್ಲಿ ೨೦ ಮಿಲಿ ಎಂಡೋಸಲ್ಫಾನನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಎಲೆಗಳ ಕೆಳಭಾಗ ಚೆನ್ನಾಗಿ ನೆನೆಯುವಂತೆ ಸಿಂಪರಿಸಿ.

**ರಾಗಿ ನೀರಾವರಿ**

ಸಸಿಮಡಿಯಲ್ಲಿ ರಾಗಿ ಬಿತ್ತನೆಯನ್ನು ಫೆಬ್ರವರಿಯಲ್ಲಿ ಪ್ರಾರಂಭಮಾಡಿ ಮಾರ್ಚಿ ಅಂತ್ಯದವರೆಗೂ ಮುಂದುವರಿಸಬಹುದು. ಬೇಗ ಬಿತ್ತಿದಷ್ಟೂ ಹೆಚ್ಚು ಇಳುವರಿ ಪಡೆಯಬಹುದು. ನೀರಾವರಿಯಲ್ಲಿ ಬೆಳೆಯಲು ಶಿಫಾರಸ್ಸು ಮಾಡಿರುವ ತಳಿಗಳೆಂದರೆ ಇಂಡಾಫ್-೯, ಇಂಡಾಫ್-೧೫, ಹೆಚ್.ಆರ್.೯೧೧ ಹಾಗೂ ಜಿ.ಪಿ.ಯು ೨೮. ಒಂದು ಎಕರೆ ಪ್ರದೇಶದಲ್ಲಿ ನಾಟಿಮಾಡಲು ಬೇಕಾಗುವಷ್ಟು ಪೈರನ್ನು ಬೆಳೆಸಲು ೧೧/೨ ಗುಂಟೆ ಪ್ರದೇಶಬೇಕಾಗುತ್ತದೆ. ಹಾಗೂ ೨೧/೨ ಕೆ.ಜಿ. ಬಿತ್ತನೆ ಬೀಜ ಬೇಕಾಗುತ್ತದೆ. ೧೨ ಗುಂಟೆ ಪ್ರದೇಶದಲ್ಲಿ ೨೫ ಅಡಿ ಉದ್ದ, ೪ ಅಡಿ ಅಗಲ ಹಾಗೂ ೪ ಅಂಗುಲ ಎತ್ತರದ ೧೫ ಸಸಿಮಡಿಗಳನ್ನು ತಯಾರಿಸಿ, ಪ್ರತಿ ಸಸಿಮಡಿಗೆ ೫ ಮಂಕರಿಗಳಷ್ಟು ಕಾಂಪೋಸ್ಟ ೧/೨ ಕೆ.ಜಿ. ೧೭ : ೧೭ : ೧೭ ಸಂಯುಕ್ತ ರಾಸಾಯನಿಕ ಗೊಬ್ಬರ ಮತ್ತು ೩೦೦ ಗ್ರಾಂ ಸತುವಿನ ಸಲ್ಫೇಟನ್ನು ಮಣ್ಣಿನಲ್ಲಿ ಬೆರೆಸಿ. ರೈತರು ತಾವೇ ಬೆಳೆದಂತಹಾ ಬಿತ್ತನೆ ಬೀಜವಾದಲ್ಲಿ ಪ್ರತಿ ಕೆ.ಜಿ. ಬೀಜವನ್ನು ೨ ಗ್ರಾಂ ಡೈಥೈನ್ ಎಂ-೪೫ ಅಥವಾ ಪ್ಯಾರಾಸಾನ್‌ನಿಂದ ಬೀಜೋಪಚಾರ ಮಾಡಿ. ಬಿತ್ತನೆಯನ್ನು ೩ ಅಂಗುಲ ಅಂತರದ ಸಾಲಿನಲ್ಲಿ ಒಂದೇ ಸಮನಾಗಿ ಬಿತ್ತಿ. ಬಿತ್ತಿದ ೧೨ ದಿವಸಗಳ ನಂತರ ಪ್ರತಿ ಸಸಿಮಡಿಗೆ ೨೫೦ ಗ್ರಾಂ ಯೂರಿಯಾ ಅಥವಾ ೫೦೦ ಗ್ರಾಂ ಅಮೋನಿಯಂ ಸಲ್ಫೇಟ್‌ನ್ನು ಕೊಡಿ. ನಾಟಿ ಮಾಡಲು ಮುಖ್ಯ ಭೂಮಿಯನ್ನು ಸಿದ್ಧಮಾಡಿ ೮-೧೦ ಗಾಡಿ ಕೊಟ್ಟಿಗೆ ಗೊಬ್ಬರವನ್ನು ಮಣ್ಣಿನಲ್ಲಿ ಬೆರೆಸಿ. ನಾಟಿಮಾಡುವುದು ೩-೪ ದಿನಗಳಿವೆ ಎನ್ನುವಾಗ ಸಸಿಮಡಿಗೆ ೧೦ ಮಿಲಿ ಮೀಥೈಲ್ ಪ್ಯಾರಾಥಿಯಾನ್ ಅಥವಾ ೫ ಮಿಲಿ ಫಾಸ್ಫೋಮಿಡಾನ್ ಮತ್ತು ೨೫ ಗ್ರಾಂ ಮ್ಯೂಂಕೋಜೆಬ್‌ನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಿಸಿ. ನಾಟಿ ಮಾಡಲು ೨೦-೨೨ ದಿನದ ಪೈರನ್ನೇ ಬಳಸಿ. ನಾಟಿಗೆ ಮೊದಲು ಒಂದು ಎಕರೆ ಪ್ರದೇಶಕ್ಕೆ ೧೦೦ ಕೆ.ಜಿ. ಅಮೋನಿಯಂ ಸಲ್ಫೇಟ್, ೧೨೫ ಕೆ.ಜಿ. ಸೂಪರ್ ಫಾಸ್ಫೇಟ್ ಮತ್ತು ೩೩ ಕೆ.ಜಿ. ಮ್ಯೂರೇಟ್ ಆಫ್ ಪೊಟಾಷ್ ರಸಗೊಬ್ಬರಗಳನ್ನು ಭೂಮಿಗೆ ಸೇರಿಸಿ. ನಂತರ ೯ ಅಂಗುಲ ಅಂತರದ ಸಾಲುಗಳಲ್ಲಿ ಪೈರಿನಿಂದ ಪೈರಿಗೆ ೪ ಅಂಗುಲ ಅಂತರವಿರುವಂತೆ ಪ್ರತಿ ಗುಣಿಗೆ ೨-೩ ಪೈರನ್ನು ನಾಟಿ ಮಾಡಿ. ಬೆಳೆ ತೆಂಡೆ ಹೊಡೆಯುವ ಹಾಗೂ ತೆನೆ ಹೊರಬರುವ ಸಮಯಗಳಲ್ಲಿ ನೀರಿನ ಕೊರತೆಯಾಗದಂತೆ ಎಚ್ಚರವಹಿಸಿ. ನಾಟಿ ಮಾಡಿದ ೩೦ ದಿವಸಗಳ ನಂತರ ಕಳೆ ಕಿತ್ತು ಎಕರೆಗೆ ೪೩ ಕೆ.ಜಿ. ಯಾರಿಯಾ ರಸಗೊಬ್ಬರ ಕೊಟ್ಟು ಮಣ್ಣು ಏರು ಹಾಕಿ.

**ನೆಲಗಡಲೆ**

ನೆಲಗಡಲೆ ಬಿತ್ತಿದ ೪ ನೇ ವಾರ ಮತ್ತು ೬ನೇ ವಾರಗಳಲ್ಲಿ ತೆಳುವಾಗಿ ನೀರು ಹಾಯಿಸಿ. ಈ ಹಂತದಲ್ಲಿ ನೀರಿನ ಕೊರತೆಯುಂಟುಮಾಡುವುದರಿಂದ ಎಲ್ಲಾ ಹೂಗಳೂ ಒಂದೇ ಬಾರಿಗೆ ಅರಳಲು ಅನುಕೂಲವಾಗುತ್ತದೆ. ಹೆಚ್ಚು ನೀರು ಹಾಯಿಸುವುದರಿಂದ ಸಸ್ಯದ ಬೆಳವಣಿಗೆ ಹೆಚ್ಚಾಗಿ ಊಡುಗಳು (Gynophores) ಭೂಮಿಯೊಳಗೆ ಇಳಿಯಲು ಸಾಧ್ಯವಾಗದೆ ಇಳುವರಿ ಕಡಿಮೆಯಾಗುತ್ತದೆ. ಬಿತ್ತಿದ ೨೦ ದಿನಗಳನಂತರ ೩ ಎಲೆಗಳು ಮೂಡಿದಾಗ ಎಲೆಸುರುಳಿ ಹುಳುವಿನ ನಿಯಂತ್ರಣಕ್ಕೆ





೧೦ ಮಿಲಿ ಮೀಥೈಲ್ ಪ್ಯಾರಾಥಿಯಾನ್ ಅಥವಾ ೧೦ ಮಿಲಿ. ಮಾನೋಕ್ರೋಟೋಫಾಸ್‌ನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪಡಿಸಿ. ಹೂ ಬಿಡುವ ಸಮಯದಲ್ಲಿ ಎಲೆಚುಕ್ಕೆ ರೋಗವನ್ನು ನಿಯಂತ್ರಿಸಲು ೫ ಗ್ರಾಂ ಬೆವಿಸ್ಟಾನನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಿಸಿ.

ಬಿತ್ತನೆ ಸಮಯದಲ್ಲಿ ಜಿಪ್ಸಂ ಕೊಡದಿದಲ್ಲಿ ಬಿತ್ತಿದ ೩೦ ದಿನಗಳೊಳಗೆ ಎಕರೆಗೆ ೨೦೦ ಕೆ.ಜಿ. ಜಿಪ್ಸಂನ್ನು ಗಿಡದ ಬುಡಕ್ಕೆ ಬೀಳುವಂತೆ ಕೊಟ್ಟು ಮಣ್ಣು ಏರು ಹಾಕಿ ಬಿತ್ತನೆಯಾದ ೧೫, ೩೦, ೪೦ ದಿವಸಗಳಲ್ಲಿ ಅಂತರ ಬೇಸಾಯ ಮಾಡಿ ಕಳೆಗಳನ್ನು ನಿಯಂತ್ರಿಸಿ. ರಾಸಾಯನಿಕ ಕಳೆನಾಶಕಗಳನ್ನು ಬಳಸುವುದಾದರೆ ಬಿತ್ತನೆಯಾದ ಮಾರನೇ ದಿನ ಎಕರೆಗೆ ೧ ರಿಂದ ೧.೨೫ ಲೀಟರ್ ಅಲಾಕ್ಲೋರನ್ನು (ಲ್ಯಾಸ್ಸೋ) ೩೦೦ ಲೀಟರ್ ನೀರಿನಲ್ಲಿ ಬೆರೆಸಿ ಭೂಮಿ ಚೆನ್ನಾಗಿ ನೆನೆಯುವಂತೆ ಸಿಂಪರಿಸಿ. ಸಿಂಪರಿಸಿದ ನಂತರ ಭೂಮಿಯನ್ನು ತುಳಿಯಬೇಡಿ.

**ಸೂರ್ಯಕಾಂತಿ**

ಬಿತ್ತನೆಯಾದ ೪೦ ದಿನಗಳಲ್ಲಿ ಎಕರೆಗೆ ೨೫ ಕೆ.ಜಿಯೂರಿಯಾವನ್ನು ಮೇಲು ಗೊಬ್ಬರವಾಗಿ ಕೊಟ್ಟು ಮಣ್ಣು ಏರುಹಾಕಿ. ಹೂ ಅರಳುವ ಸಮಯದಲ್ಲಿ ಬೆಳಗ್ಗೆ ೮ ರಿಂದ ೧೧ ಗಂಟೆಯವರೆಗೆ ಕೈಗೆ ಒಂದು ತೆಳುವಾದ ಬಟ್ಟೆಯನ್ನು ಸುತ್ತಿಕೊಂಡು ೮-೧೦ ದಿನಗಳ ಕಾಲ ದಿನಬಿಟ್ಟು ದಿನ ಕೃತಕ ಪರಾಗ ಸ್ಪರ್ಷ ಕಾರ್ಯ ಮಾಡುವುದರಿಂದ ಶೇ ೨೫ರವರೆಗೂ ಇಳುವರಿಯನ್ನು ಹೆಚ್ಚಿಸಬಹುದು.

ಎಲೆ, ಮೊಗ್ಗು, ಹೂ ಮತ್ತು ಕಾಳುಗಳನ್ನು ತಿನ್ನುವ ಹೀಲಿಯೋಥಿಸ್ ಹುಳುವಿನ ಹತೋಟಿಗಾಗಿ ೧೫ ಮಿಲಿ ಎಂಡೋ ಸಲ್ಫಾನನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಿಸಿ ಅಥವಾ ಎಲೆ ತಿನ್ನುವ ಹೂವಿನ ಹತೋಟಿಗಾಗಿ ಎಕರೆಗೆ ೮ ಕೆ.ಜಿ. ಶೇ ೨ ರ ಮೀಥೈಲ್ ಪ್ಯಾರಾಥಿಯಾನನ್ನು ಧೂಳೀಕರಿಸಿ ತುಕ್ಕುರೋಗ ಹಾಗೂ ಎಲೆ ಅಂಗಮಾರಿರೋಗ (Blight) ಕಾಣಿಸಿಕೊಂಡಲ್ಲಿ ೨೦ ಗ್ರಾಂ ಮ್ಯಾಂಕಜೆಟ್ ಅನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಿಸಿ.

ಹೆಸರು, ಉದ್ದು, ಅಲಸಂದೆ, ಹೆಬ್ಬಾಳ್‌ಅವರೆ, ಸೋಯಾಅವರೆಯನ್ನು ಮಾರ್ಚಿ ಅಂತ್ಯದವರೆಗೂ ಬಿತ್ತಬಹುದು.

**ಮಾವು**

ಜಿಗಿಹುಳು ಮತ್ತು ಬೂದಿರೋಗದ ನಿಯಂತ್ರಣಕ್ಕಾಗಿ ೨೦ ಗ್ರಾಂ ಕಾರ್ಬರಿಲ್ ಅಥವಾ ೨೦ ಮಿಲಿ. ಮೆಲಾಥಿಯಾನ್ ಅಥವಾ ೧೩ ಮಿಲಿ. ಮಾನೋಕ್ರೋಟೋಫಾಸ್ ಮತ್ತು ೩೦ ಗ್ರಾಂ ನೀರಿನಲ್ಲಿ ಕರಗುವ ಗಂಧಕವನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಹೂಬಿಡುವ ಮುನ್ನ ಮತ್ತು ಕಾಯಿಕಟ್ಟಿದ ನಂತರ ಸಿಂಪಡಿಸಿ ತಿಂಗಳಿಗೊಂದು ಬಾರಿ ಕನಿಷ್ಠ ೨-೩ ಬಾರಿಯಾದರೂ ಸಿಂಪಡಿಸಿ ಜಿಗಿಹುಳುವಿನ ಬಾಧೆ ಕಂಡು ಬಂದಾಗ ಬೇವಿನ ಬೀಜದ ಕಷಾಯವನ್ನು ಬಳಸಬಹುದು.

**ಕಲ್ಲಂಗಡಿ**

ನಾಲ್ಕು ವಾರಗಳ ಬೆಳೆಗೆ ಎಕರೆಗೆ ೪೬ ಕೆ.ಜಿ. ಯೂರಿಯಾ ರಸಗೊಬ್ಬರವನ್ನು ಮೇಲುಗೊಬ್ಬರವಾಗಿ ಕೊಡಿ. ೩೦ ದಿವಸಗಳ ಸಸಿಗಳ ಕುಡಿಯನ್ನು ಚಿವುಟುವುದರಿಂದ ಪಕ್ಕದ ಕುಡಿಗಳು ಹೆಚ್ಚಾಗಲು ಸಹಾಯವಾಗಿ ಇಳುವರಿ ಹೆಚ್ಚುತ್ತದೆ.

ಕೀಟ ಮತ್ತು ಬೂದಿ ರೋಗದ ಬಾಧೆಯನ್ನು ತಡೆಗಟ್ಟಲು ೨೦ ಗ್ರಾಂ ಕಾರ್ಬರಿಲ್ ಅಥವಾ ೧೭ ಮಿಲಿ ಡೈ-ಮೀಥೋಯೇಟ್ ಮತ್ತು ೩೦ ಗ್ರಾಂ ನೀರಿನಲ್ಲಿ ಕರಗುವ ಗಂಧಕದ ಪುಡಿಯನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಬಳ್ಳಿಗಳ ಮೇಲೆ ಸಿಂಪಡಿಸಿ ಕಪ್ಪುಕೊಳೆ ರೋಗದ ಬಾಧೆ ಕಂಡು ಬಂದಲ್ಲಿ ೨೦ ಗ್ರಾಂ ಕ್ಲೋರೋಡೋಸೆಲಾನ್ (Chlorodoselan) (Kavach) ಅನ್ನು ೧೦ ಲೀಟರ್ ನೀರಿನಲ್ಲಿ ಬೆರೆಸಿ ಸಿಂಪರಿಸಿ.

ಫೆಬ್ರವರಿ ತಿಂಗಳಲ್ಲಿ ಪ್ರಾರಂಭಿಸಬಹುದಾದ ಇನ್ನಿತರ ಬೆಳೆಗಳೆಂದರೆ, ಮೆಣಸಿನ ಕಾಯಿ, ದೊಣ್ಣೆ ಮೆಣಸಿನಕಾಯಿ, ಟೊಮಾಟೋ, ಬದನೆ, ಈರುಳ್ಳಿ, ಮೂಲಂಗಿ, ಬೆಂಡೆ, ತಿಂಗಳ ಹುರುಳಿ, ಗೋರಿಕಾಯಿ, ಬೂದುಗುಂಬಳ, ಸೌತೆಕಾಯಿ, ಸಿಹಿ ಕುಂಬಳ, ಸೋರೆ, ಹಾಗಲ, ಕ್ಯಾರೆಟ್.

ಮೆಣಸಿನ ಕಾಯಿ, ಟೊಮಾಟೋ, ದೊಣ್ಣೆ ಮೆಣಸಿನಕಾಯಿ ಬೆಳೆಗಳಲ್ಲಿ ಬೇಸಿಗೆಯಲ್ಲಿ ಎಲೆ ಮುರುಟುರೋಗ (ಮಲ್ಲೇ ರೋಗ Leaf Curl)ದ ಬಾಧೆ ಹೆಚ್ಚಾಗಿರುತ್ತದೆ. ಸಸಿಮಡಿಯಿಂದಲೇ ಸೂಕ್ತ ಕ್ರಮಗಳನ್ನು ಕೈಗೊಂಡಲ್ಲಿ ಅಧಿಕ ಇಳುವರಿ ಹಾಗೂ ಅಧಿಕ ಲಾಭ ಪಡೆಯಬಹುದು. ಸಸಿಮಡಿಯಲ್ಲಿ ಬೀಜಬಿತ್ತಿದ ನಂತರ ೪೦ ಮೆಷ್ ಅಳತೆಯುಳ್ಳ ನೈಲಾನ್ ಪರದೆಯನ್ನು ಮಡಿಗಳ ತಪ್ಪದೆ ಮುಚ್ಚಿ ಮುಖ್ಯ ಭೂಮಿಯಲ್ಲಿ ನಾಟಿ ಮಾಡಿದ ನಂತರ ಹೋಸ್ಟೋತಿಯಾನನ್ನು (Hostothion) ೫ ಬಾರಿ ೧೫ ದಿನಗಳಿಗೊಮ್ಮೆ ಸಿಂಪರಿಸಿ. ಇದರಿಂದ ಎಲೆಮುರುಟು ರೋಗ ಬಾರದಂತೆ ತಡೆಯಬಹುದು.

# ಶ್ರೀ ಉದ್ಧಾನ ಶಿವಯೋಗಿಗಳ ಪುಣ್ಯಾರಾಧನೆ

'ಮಹಾತ್ಮಾಜಿಯವರು ಕಂಡ ಸ್ವಾತಂತ್ರ್ಯದ ಕಲ್ಪನೆ ಇಂದು ದುರುಪಯೋಗವಾಗುತ್ತಿದೆ. ಎಂಟು ಯೋಜನೆಗಳು ಮುಗಿದರೂ ಸಮಸ್ಯೆಗಳ ಪರಿಹಾರವಿಲ್ಲ. ಬಡತನ ಭೀಕರವಾಗಿದೆ. ಮಾನವೀಯ ಮೌಲ್ಯಗಳು ನಶಿಸುತ್ತಿವೆ. ನೈತಿಕ ಜೀವನ ಕೆಳಮಟ್ಟಕ್ಕಿಳಿದಿದೆ. ಇವುಗಳ ಪರಿಹಾರಕ್ಕೆ ಜನತೆ ಮಹಾ ಸಂಕಲ್ಪಶಕ್ತಿ ಮತ್ತು ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳಬೇಕು' ಎಂದು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕರೆ ನೀಡಿದರು.

ಅವರು ದಿನಾಂಕ ೧೫-೦೧-೨೦೦೦ನೇ ಶನಿವಾರ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಪೂಜ್ಯ ಶ್ರೀ ಉದ್ಧಾನ ಶಿವಯೋಗಿಗಳವರ ೫೫ನೇ ಪುಣ್ಯಾರಾಧನೆ ಸಮಾರಂಭದ ದಿವ್ಯಸಾನಿಧ್ಯ ವಹಿಸಿ ಆಶೀರ್ವಚನ ನೀಡುತ್ತಿದ್ದರು.

"ಯಾವುದೇ ಮಹಾಪುರುಷರ ಸಾಧನೆಯ ಹಿಂದೆ ಸ್ತ್ರೀಯರ ಶಕ್ತಿ ಪ್ರೇರಕವಾಗಿದೆ. ಹೆಣ್ಣುಮಕ್ಕಳು ನೈತಿಕ ಸಂಪನ್ನರಾಗಿರಬೇಕು. ರಾಷ್ಟ್ರಕಟ್ಟುವ, ಬೆಳೆಸುವ, ಕಾರ್ಯದಲ್ಲಿ ನಿರತರಾಗಬೇಕು. ಸೀತೆಯಂತಹ ಆದರ್ಶ ಮಹಿಳೆಯರಾಗಬೇಕು" ಎಂದರಲ್ಲದೆ. "ನಮ್ಮ ಗುರುಗಳು ಪವಿತ್ರ ಆಧ್ಯಾತ್ಮ ಶಿಲ್ಪಿಗಳು, ಅವರದು ಅಕ್ಷರವಿದ್ಯೆಯಲ್ಲ ಶಿವಯೋಗ ವಿದ್ಯೆ. ಸಮಾಜಕ್ಕೆ ಅವರ ಮಹತ್ತರ ಕೊಡುವ ಎಂದರೆ ಸಾರ್ವಜನಿಕ ಉಚಿತ ಪ್ರಸಾದ ನಿಲಯ ಸ್ಥಾಪನೆ ಮತ್ತು ಸಂಸ್ಕೃತ ಶಾಲೆಯನ್ನು ಸ್ಥಾಪಿಸಿದ್ದು" ಎಂದು ಹೇಳಿದರು.

"ಗ್ರಾಮಾಂತರ ಪ್ರದೇಶದಲ್ಲಿ ವ್ಯಾಜ್ಯಗಳನ್ನು ಬಗೆಹರಿಸಿ ಒಗ್ಗಟ್ಟಿನಿಂದ ಪ್ರೀತಿಯಿಂದ, ಸಹಕಾರ, ಶಾಂತಿ, ನೆಮ್ಮದಿಯಿಂದ ಬದುಕುವಂತೆ ಆಶೀರ್ವದಿಸುತ್ತಿದ್ದರು. ಅವರ ನಿಷ್ಠೆ, ಮಹಾತಪಸ್ಸು, ಬ್ರಹ್ಮಚರ್ಯೆಪಾಲನೆ, ಜಾತಿರಹಿತ ಸಮಾಜಕಲ್ಪನೆ ನಮಗೆ ಮಾದರಿಯಾಗಿವೆ. ಅವರ ದಿವ್ಯ ಸಂದೇಶಗಳನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡಾಗ ಜೀವನ ಸಾರ್ಥಕವಾಗುತ್ತದೆ" ಎಂದು ಆಶೀರ್ವದಿಸಿದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ಬೆಳಗಾಂ ಜಿಲ್ಲೆಯ ಅಥಣಿ ಗಚ್ಚಿನ ಮಠಾಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಮಹಾಸ್ವಾಮಿಗಳು ಮಾತನಾಡುತ್ತಾ "ಸಂಕ್ರಾಂತಿ ಎಂದರೆ ಹಠಾತ್ ಬದಲಾವಣೆ. ಶ್ರೀ ಮಠದಲ್ಲಿ



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನಿಧ್ಯದಲ್ಲಿ ಅಥಣಿ ಗಚ್ಚಿನ ಮಠದ ಪರಮಪೂಜ್ಯ ಶ್ರೀ ಶ್ರೀ ಚೆನ್ನಬಸವ ಮಹಾಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮ ಉದ್ಘಾಟನೆ : ಚಿತ್ರದಲ್ಲಿ ಕಿರಿಯ ಶ್ರೀಶ್ರೀಗಳವರನ್ನು ಕಾಣಬಹುದು.

ಉದ್ಧಾನಶಿವಯೋಗಿಗಳು ಶಿಕ್ಷಣದ ಸಂಕ್ರಾಂತಿ ಮಾಡಿದ್ದಾರೆ. ಜನತೆಯನ್ನು ಉತ್ತಮ ವ್ಯಕ್ತಿಗಳನ್ನಾಗಿ ರೂಪಿಸುವುದು ಅವರ ಸಂಕಲ್ಪವಾಗಿತ್ತು. ಶ್ರೀಮಠದ ಕೀರ್ತಿಯನ್ನು ಮೇರು ಸದೃಶಕ್ಕೇರಿಸಿದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಆಯ್ಕೆ ಮಾಡಿದ್ದು ಇವರ ದೂರದೃಷ್ಟಿ, ಕತೃತ್ವಶಕ್ತಿಗೆ ಉದಾಹರಣೆಯಾಗಿದೆ. ಆ ಮಹಾಚೇತನದ ದಿವ್ಯ ಸಂದೇಶ ನಮಗೆ ದಾರಿ ದೀಪವಾಗಿದೆ" ಎಂದು ನುಡಿದರು.

ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ







ಶ್ರೀ ಉದ್ದಾನ ಶಿವಯೋಗಿಗಳವರ ವೈಭವದ ಪಾಲಕಿ ಉತ್ಸವ



ಶ್ರೀ ಹೆಚ್.ಎಸ್. ನೀಲಕಂಠಯ್ಯ ಮತ್ತು ತಂಡದವರಿಂದ ವೀರಗಾಸೆ ನೃತ್ಯ

ಮಹಾಸ್ವಾಮಿಗಳು ಭಕ್ತಿಸಮರ್ಪಣೆ ಸಲ್ಲಿಸುತ್ತಾ "ಸಾಹಿತ್ಯವನ್ನು ತಿಳಿದುಕೊಂಡರೆ ಸಾಲದು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಯಾರು ಮಹಾತ್ಮರಾಗಿ ಹೋಗಿದ್ದಾರೋ ಅವರ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು ನಡೆಯಬೇಕು. ಪುಣ್ಯಾರಾಧನೆಯ ಉದ್ದೇಶ ಅವರ ಮಾರ್ಗದರ್ಶನದಲ್ಲಿ ನಡೆಯುವುದು" ಎಂದು ನುಡಿದರು.

ಗುಲ್ಬರ್ಗಾದ ಕನ್ನಡ ಪ್ರಾಧ್ಯಾಪಕರಾದ ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ ಅವರು ತಮ್ಮ ಉಪನ್ಯಾಸದಲ್ಲಿ "ಶರಣರ ವಚನಗಳು ನಡೆದು ನುಡಿದಂತಹವುಗಳು. ಅರಿವು, ಆಚಾರ, ಅನುಭವಗಳ ಸುಂದರ ಸಮನ್ವಯದಂತೆ ಇವೆ. ಶರಣ ಸಾಹಿತ್ಯ ಇಡೀ ಮನುಕುಲಕ್ಕೆ ಸೇರಿದ್ದು. ವಿಶ್ವದ ಜ್ವಲಂತ ಸಮಸ್ಯೆಗಳಿಗೆ ವಚನಗಳು ಉತ್ತರ ಕೊಡುತ್ತವೆ. ನಮ್ಮದು ಪುಸ್ತಕ ಜ್ಞಾನ. ಜ್ಞಾನ ದಾಸೋಹವನ್ನು ಶ್ರೀಗಳಂತಹವರು ಮಾಡಬೇಕು. ಧರ್ಮದ ನೆಲೆಗಟ್ಟಿನ ಮೇಲೆ ನಾವು ನಿಂತಿಲ್ಲದ ಕಾರಣ ಎಲ್ಲಾ ಕ್ಷೇತ್ರದಲ್ಲಿ ರಾಜಕಾರಣ ಆವರಿಸಿದೆ. ಇದರ ಪರಿಹಾರಕ್ಕೆ ಶರಣ ಸಂದೇಶಗಳೇ ನಮಗೆ ಮಾರ್ಗದರ್ಶಿಯಾಗಿವೆ" ಎಂದು ತಿಳಿಸಿದರು.

ಸಕಲೇಶಪುರದ ಕಿರಿಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀಮತಿ ಸುಶೀಲಸೋಮಶೇಖರ್ ವಚನಕಾರ್ತಿಯರ ಬಗ್ಗೆ ಮಾತನಾಡುತ್ತಾ "ಯಾವುದೇ ವ್ಯಕ್ತಿಯ ಉನ್ನತಿಗೆ ಗುರುಗಳ, ಹಿರಿಯರ, ಆಶೀರ್ವಾದ, ಅವರ ಚೈತನ್ಯಶಕ್ತಿ ದೊರೆಯಬೇಕು. ಬಸವಣ್ಣನ ಮಹಾಕಾರ್ಯಕ್ಕೆ ರಥದ ಎರಡು ಚಕ್ರಗಳಂತೆ ತೆರೆಮರೆಯಲ್ಲಿ ತಮ್ಮ ಜೀವನವನ್ನೇ ಮುಡುಪಾಗಿಟ್ಟವರು ನಾಗಲಾಂಬಿಕೆ, ಗಂಗಾಂಬಿಕೆ. ಅರಮನೆ, ಗುರುಮನೆಗೆ ಮೀಸಲಾಗಿದ್ದ ಸಾಹಿತ್ಯವನ್ನು ಸಾರ್ವತ್ರಿಕಗೊಳಿಸಿದವರು. ಬಸವಣ್ಣನವರು. ಶರಣರು



ಡಾ. ಎಂ.ಎಸ್. ಲಠ್ಠೆ ಅವರಿಂದ ಉಪನ್ಯಾಸ



ಶ್ರೀಮತಿ ಸುಶೀಲ ಸೋಮಶೇಖರ್ ಅವರಿಂದ ಉಪನ್ಯಾಸ



ಶ್ರೀಕ್ಷೇತ್ರದ ಪ್ರಕಟಣೆಯಾದ 'ನಿರಂಜನ ವಂಶರತ್ನಾಕರ' ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಬಿಡುಗಡೆ ಮಾಡುತ್ತಿರುವುದು.

ಸಂಸಾರದಲ್ಲಿ ಸಾಮರಸ್ಯದಿಂದ ಸುಂದರ ಬದುಕು ನಡೆಸುತ್ತಿದ್ದರು. ಸತಿಪತಿಗಳ ಭಕ್ತಿ ಒಂದಾಗಿತ್ತು. ಕಾಯಕದಲ್ಲಿ ಎಚ್ಚರ ತಪ್ಪುತ್ತಿದ್ದ ತನ್ನ ಗಂಡನನ್ನೇ ತಿದ್ದಿತೀಡಿ ಸನ್ಮಾರ್ಗದಲ್ಲಿ ಕೊಂಡೊಯ್ಯುತ್ತಿದ್ದ ಆಯ್ದಕ್ಕಿ ಲಕ್ಕಮ್ಮನಂತಹ ಶರಣೆಯರ ಜೀವನ ನಮಗೆ ಮಾರ್ಗದರ್ಶನವಾಗಿದೆ. ಇಡಿ ವಿಶ್ವದಲ್ಲಿ ಮಾನವ ಮಾನವನಾಗಿ ಬದುಕುವ ಕಲೆಯನ್ನು ಶರಣ ಸಂಸ್ಕೃತಿಯಲ್ಲಿ ಕಾಣಬಹುದು.



ಶ್ರೀಕ್ಷೇತ್ರದ ಕಿರಿಯ ಶ್ರೀಶ್ರೀಗಳಾದ
ಶ್ರೀ ಶ್ರೀ ಸಿದ್ದಲಿಂಗಸ್ವಾಮಿಗಳವರಿಂದ ಆಶೀರ್ವಚನ

ಶ್ರೀ ಕ್ಷೇತ್ರದಲ್ಲಿ ಅಧ್ಯಯನ ಮಾಡುವ ಮಕ್ಕಳು ಪುಣ್ಯವಂತರು. ಚಂಚಲ ಮನಸ್ಸಿನ ಜನತೆ ಇಂತಹ ಮಠಕ್ಕೆ ಬರಬೇಕು, ಸಂಸ್ಕಾರ ಪಡೆಯಬೇಕು. ಆತ್ಮಸಾಕ್ಷಾತ್ಕಾರ ಪಡೆಯಬೇಕು ಎಂದು ಕರೆ ನೀಡಿದರು. **"ನಿರಂಜನ ವಂಶ ರತ್ನಾಕರ"** ಎಂಬ ಕೃತಿಯನ್ನು ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಬಿಡುಗಡೆ ಮಾಡಿದರು. ಪ್ರಾರಂಭದಲ್ಲಿ ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ವಿದ್ಯಾರ್ಥಿಗಳು ವಚನಾಮೃತ ಎಂಬ ನೃತ್ಯರೂಪಕವನ್ನು ಪ್ರದರ್ಶಿಸಿದರು. ಪರಮ ಪೂಜ್ಯರ ನೇತೃತ್ವದಲ್ಲಿ ಪರಮ ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳ ಭಾವಚಿತ್ರದ ಪಲ್ಲಕ್ಕಿ ಉತ್ಸವವನ್ನು ಜನಪದ ಕಲಾವಿಧ, ರಾಜ್ಯಪ್ರಶಸ್ತಿ ವಿಜೇತ ಶ್ರೀ ಹೆಚ್. ಎಸ್. ನೀಲಕಂಠಯ್ಯ ಮತ್ತು ತಂಡದವರಿಂದ ವೀರಗಾಸೆ ನೃತ್ಯ, ಕರಡಿ ಮಜಲು, ನಂದಿಧ್ವಜ, ಮಂಗಳವಾದ್ಯ, ಮಂಗಳ ಕಲಶ, ವಚನ ಗಾಯನದ ಮೂಲಕ ವೇದಿಕೆಗೆ ಬರಮಾಡಿಕೊಳ್ಳಲಾಯಿತು.

ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಸ್ವಾಗತಿಸಿದರು. ಗುಲ್ಬರ್ಗಾದ ಕರುಣೇಶ ಸ್ವಾಮಿಗಳು ವಂದನೆ ಸಲ್ಲಿಸಿದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಕಾರ್ಯಕ್ರಮ ನಿರೂಪಿಸಿದರು.





# ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭ

''ಇಂದು ವಿಜ್ಞಾನಯುಗ ಸಮಸ್ಯೆಗಳು ಬೆಳೆಯುತ್ತಲೇ ಇವೆ. ಇದರ ಪರಿಹಾರಕ್ಕೆ ಶರಣರತತ್ವಗಳನ್ನು ಅನುಸರಿ ಸುವುದರಿಂದ ಮಾತ್ರ ಸಾಧ್ಯ. ಬಸವಣ್ಣ ಶ್ರೇಷ್ಠ ಪ್ರಜಾಪ್ರಭುತ್ವ ವಾದಿ. ಬಸವಣ್ಣನವರಂತೆ ಅಧಿಕಾರಿಗಳು, ಮುಖಂಡರು, ಪ್ರಾಮಾಣಿಕರಾಗಿದ್ದರೆ, ನಿಷ್ಠಾವಂತರಾಗಿದ್ದರೆ, ದೇಶಪ್ರೇಮಿ ಗಳಾಗಿದ್ದರೆ, ಸರಳಜೀವಿಗಳಾಗಿದ್ದರೆ, ವಿಚಾರವಂತರಾಗಿದ್ದರೆ ದೇಶ ರಾಮರಾಜ್ಯವಾಗುತ್ತಿತ್ತು. ಹಸನಾದ ಸಮಾಜ ನಿರ್ಮಾಣವಾಗುತ್ತಿತ್ತು'' ಎಂದು ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀ ಮಠದಲ್ಲಿ ನಡೆದ ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿ ಆಶೀರ್ವಚನ ವಿತ್ತರು.

''ಎಲ್ಲರೂ ಶ್ರಮಿಸಬೇಕು, ಎಲ್ಲರ ಪ್ರಗತಿಯಾಗಬೇಕು. ದುಡಿಮೆ ಮಾಡಬೇಕು, ಹೃದಯ ವಿಶಾಲತೆ ಇರಬೇಕು. ಯಾವುದೇ ಕಾಯಕ ಮಾಡಿದರು ನೀತಿವಂತವಾಗಿರಬೇಕು, ಜನತೆ ಸ್ಥಿರಸಂಕಲ್ಪವುಳ್ಳವರಾಗಬೇಕು; ಆತ್ಮವಿಶ್ವಾಸವಿರಬೇಕು. ಸಾಧಕಜೀವಿಗಳಾಗಬೇಕು ಜನಜಾಗೃತವಾಗದ ಹೊರತು ದೇಶ ಉದ್ಧಾರವಾಗಲಾರದು'' ಎಂದು ಆಶೀರ್ವಚನದಲ್ಲಿ ಎಚ್ಚರಿ ಸಿದರು.

ಹೊಸಪೇಟೆ ತಾಲ್ಲೂಕು ಹಂಪಿ ವಿಶ್ವವಿದ್ಯಾಲಯದ ಕುಲಸಚಿವರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಉಪನ್ಯಾಸ ನೀಡುತ್ತಾ ''ನಾನು ಶ್ರೀ ಕ್ಷೇತ್ರದಲ್ಲಿ ಶ್ರೀಗಳವರ ಆಶ್ರಯದಲ್ಲಿ ವ್ಯಾಸಂಗ ಮಾಡದೆ ಹೋಗಿದ್ದರೆ ಈ ಮಟ್ಟಕ್ಕೆ ಬರುತ್ತಿರಲಿಲ್ಲ. ನನ್ನ ಬದುಕಿನ ದೇವರು ಪರಮ ಪೂಜ್ಯರು. ಬಸವಣ್ಣ ಅಂದು ದಲಿತರಿಗೆ ರಕ್ಷಣೆ ಕೊಡದೆ ಹೋಗಿದ್ದರೆ ದಲಿತರು ನೈತಿಕವಾಗಿ ನಾಶವಾಗುತ್ತಿದ್ದರು. ದಲಿತರಿಗೆ ಗೌರವ, ಸ್ವಾಭಿಮಾನ, ಸಂಸ್ಕಾರ ಕೊಟ್ಟವರು ಬಸವಣ್ಣನವರು. ಬಸವಣ್ಣ ದಲಿತರಿಗೆ ದನಿಯಾದ, ಬಸವಣ್ಣ ಎಲ್ಲರಿಗೂ ಸೇರಿದವರು. ಸರ್ವೋದಯ ತತ್ವವನ್ನು ಜಗತ್ತಿಗೆ ಕೊಟ್ಟವರು ಬಸವಣ್ಣ. ಶರಣ ಸಂಸ್ಕೃತಿ ದೀಪಹಚ್ಚುವ ಸಂಸ್ಕೃತಿ. ದಲಿತರ ಉದ್ಧಾರ ರಾಜಕೀಯದಿಂದ ಸಾಧ್ಯವಿಲ್ಲ. ಅದು ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಆಗಬೇಕು. ದಲಿತ ವಿದ್ಯಾರ್ಥಿಗಳು ಸರ್ಕಾರದಿಂದ ಕೊಡಮಾಡುವ ಸಹಾಯಧನವನ್ನು ನಿರೀಕ್ಷಿಸದೆ ತಿರಸ್ಕರಿಸಿ ಆತ್ಮಸ್ಥೈರ್ಯದಿಂದ ಕಾಯಕಮಾಡಿ ಬದುಕುವ ಕಲೆಯನ್ನು ಕಲಿಯಬೇಕು'' ಎಂದರು. ''ದಲಿತೋದ್ಧಾರವನ್ನು ಮೊಟ್ಟಮೊದಲು ಮಾಡಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಈ ಕೆಲಸವನ್ನು ಈ ಶತಮಾನದಲ್ಲಿ ಶ್ರೀ ಶ್ರೀಗಳವರು ಮಾಡುತ್ತಿದ್ದಾರೆ'' ಎಂದು ನುಡಿದರು.

ಚಿಕ್ಕನಾಯಕನಹಳ್ಳಿ ತಾಲ್ಲೂಕು, ಹಂದನಕೆರೆಯ ಕಿರಿಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಡಾ. ಅಬ್ದುಲ್ ಹಮೀದ್ ರವರು ಉಪನ್ಯಾಸ ನೀಡುತ್ತಾ, ಈ ದೇಹ ದೇವರಿಂದ ಬಂದ ಪ್ರಸಾದಕಾಯ. ಇದನ್ನು ಹಾಳುಮಾಡದೆ ಸರ್ವತೋಮುಖವಾಗಿ ಬೆಳೆಸಬೇಕು. ಈ ದಿಶೆಯಲ್ಲಿ ವಚನ ಸಾಹಿತ್ಯ ಪೋಷಕವಾಗುತ್ತದೆ. ವಚನ ಸಾಹಿತ್ಯ ನಿತ್ಯ ನೂತನ ವಿಜ್ಞಾನವಾಗಿದೆ ಎಂದು ನುಡಿದರು.

ಅಂದು ರಾತ್ರಿ ಶ್ರೀಕ್ಷೇತ್ರದ ಕಲಾವಿದರು **"ಅನುಭವ ಮಂಟಪ"** ಎಂಬ ಕಿರುನಾಟಕವನ್ನು ಮತ್ತು **"ಎಲ್ಲಾ ಶರಣರ ನೆನೆದು"** ಎಂಬ ನೃತ್ಯರೂಪಕವನ್ನು ಪ್ರದರ್ಶಿಸಿದರು.

ಪ್ರಾರಂಭದಲ್ಲಿ ಶ್ರೀ ಕೆ.ಬಸವರಾಜು ಅವರು ಸ್ವಾಗತಿಸಿದರು, ಶ್ರೀ ಸಿ.ಎನ್. ಸಿದ್ಧಲಿಂಗಯ್ಯನವರು ವಂದನೆ ಸಲ್ಲಿಸಿದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು.

## ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಪೂರ್ವಭಾವಿ ಸಮಾರಂಭ

೧೯೯೯-೨೦೦೦ನೇ ಸಾಲಿನಲ್ಲಿ ಈ ವಸ್ತು ಪ್ರದರ್ಶನವು ದಿನಾಂಕ ೨೩.೨.೨೦೦೦ರಿಂದ ಪ್ರಾರಂಭವಾಗಿ ೮.೩.೨೦೦೦ದ ವರೆಗೆ ೧೫ ದಿನಗಳು ನಡೆಯುತ್ತದೆ. ಈ ವಸ್ತುಪ್ರದರ್ಶನದ ವ್ಯವಸ್ಥೆಯ ಬಗ್ಗೆ ಚರ್ಚಿಸಲು ವಸ್ತುಪ್ರದರ್ಶನದ ಕಾರ್ಯಕಾರಿ ಸಮಿತಿ ಸದಸ್ಯರು ಹಾಗೂ ಇತರೆ ಉಪಸಮಿತಿಗಳ ಎಲ್ಲಾ ಸದಸ್ಯರ ಸಭೆಯನ್ನು ದಿನಾಂಕ ೦೧.೦೧.೨೦೦೦ನೇ ಶನಿವಾರ ಕರೆದು ಸಲಹೆ, ಸಹಕಾರ ಗಳನ್ನು ಪಡೆಯಲಾಯಿತು. ವಸ್ತು ಪ್ರದರ್ಶನ ಸಮಿತಿಯ ಕಾರ್ಯದರ್ಶಿಗಳಾದ ಪ್ರೊ. ಬಿ. ಗಂಗಾಧರಯ್ಯ ನವರು, ಸಹಕಾರ್ಯದರ್ಶಿಗಳಾದ ಶ್ರೀ ಕೆ. ವೀರಭದ್ರಯ್ಯ ನವರು ಪ್ರದರ್ಶನದ ಪೂರ್ವಸಿದ್ಧತೆಯ ಬಗ್ಗೆ ವಿವರಿಸಿದರು.

# ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಜ್ರಮಹೋತ್ಸವ ನೆನಪಿನ ಕ್ರೀಡಾಕೂಟ



ಕಿರಿಯ ಶ್ರೀ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು.
ಚಿತ್ರದಲ್ಲಿ : ಶ್ರೀಕ್ಷೇತ್ರದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಶಾಸಕ ಶ್ರೀ ಎಸ್. ಶಿವಣ್ಣ, ಶ್ರೀಕ್ಷೇತ್ರದ ವಿದ್ಯಾಧಿಕಾರಿ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ ಮೊದಲಾದ ಗಣ್ಯರನ್ನು ಕಾಣಬಹುದು.

"ಸಹಕಾರ, ಸ್ವಾವಲಂಬನೆ, ಧೈರ್ಯ, ಸಾಹಸಗಳನ್ನು ಹೆಚ್ಚಿಸಲು ಸಹಕಾರಿಯಾದ ಕ್ರೀಡಾಕೂಟ ನಿಮಗೆ ಒಂದು ವರದಾನ ಹಾಗೂ ಸುವರ್ಣ ಅವಕಾಶ" ಎಂದು ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನುಡಿದರು.

ಅವರು ೨೫.೧೨.೧೯೯೯ರಿಂದ ೨೬.೧೨.೧೯೯೯ರವರೆಗೆ ನಡೆದ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರಮಹೋತ್ಸವದ ಸವಿನೆಪಿನ ಕ್ರೀಡಾಕೂಟದ ಉದ್ಘಾಟನಾ ಸಮಾರಂಭದ ದಿವ್ಯ ನೇತೃತ್ವ ವಹಿಸಿ ಮಾತನಾಡುತ್ತಾ, "ಮಾನಸಿಕ ಶಾಂತಿ ಮತ್ತು ಉತ್ತಮ ಆರೋಗ್ಯ ರಕ್ಷಣೆಗೆ, ಇಂತಹ ಕ್ರೀಡೆಗಳು ಸಹಕಾರಿಯಾಗಿದ್ದು, ಜೀವನದಲ್ಲಿ ನೀವೆಲ್ಲರೂ ಇಂತಹ ಕಲೆಯನ್ನು ರೂಢಿಸಿಕೊಳ್ಳಬೇಕು" ಎಂದು ಆಶೀರ್ವದಿಸಿದರು.

ಸಮಾರಂಭವನ್ನು ಉದ್ಘಾಟಿಸಿದ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯನವರು "ಈ ಕ್ರೀಡಾಕೂಟದಲ್ಲಿ ಭಾಗವಹಿಸಿರುವ ಎಲ್ಲಾ ಕ್ರೀಡಾಪಟುಗಳು ಉತ್ತಮ ಕ್ರೀಡಾಪಟುಗಳಾಗಲು ಪ್ರಯತ್ನಿಸಬೇಕು" ಎಂದು ಕರೆ ನೀಡಿದರು. ಅಧ್ಯಕ್ಷತೆ ವಹಿಸಿದ್ದ ತುಮಕೂರು ಕ್ಷೇತ್ರದ ಶಾಸಕರಾದ ಶ್ರೀ ಎಸ್. ಶಿವಣ್ಣನವರು ಮಾತನಾಡಿ, "ಈ ಸಂಸ್ಥೆಯ ಎಲ್ಲಾ ಮಕ್ಕಳು ಒಟ್ಟಾಗಿ ಕಲೆತು ಕ್ರೀಡೆಗಳನ್ನು ಆಡುವುದರ ಮೂಲಕ ಸಂಘಟನೆ, ಸಹಕಾರ, ಏಕತೆ ಬೆಳೆಸಿಕೊಳ್ಳಲು ಸಹಕಾರಿಯಾಗುತ್ತದೆ. ಇದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು" ಎಂದು ನುಡಿದರು. ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಧ್ವಜಾರೋಹಣ ಮತ್ತು ವಂದನಾ ಸ್ವೀಕಾರ







ಮುಕ್ತಾಯ ಸಮಾರಂಭ :- ಚಿತ್ರದಲ್ಲಿ : ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜು, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ ಅವರನ್ನು ಕಾಣಬಹುದು.

ಮಾಡಿದರು.

ದಿನಾಂಕ ೨೬.೧೨.೧೯೯೯ರಂದು ಕ್ರೀಡಾಕೂಟದ ಮುಕ್ತಾಯ ಸಮಾರಂಭದ ದಿವ್ಯ ಸಾನ್ನಿಧ್ಯವನ್ನು ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ವಹಿಸಿದ್ದರು. ತುಮಕೂರು ಲೋಕಸಭಾ ಕ್ಷೇತ್ರದ ಸದಸ್ಯರಾದ ಶ್ರೀ ಜಿ.ಎಸ್. ಬಸವರಾಜು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ "ಎಳೆಯ ವಯಸ್ಸಿನಲ್ಲಿ ಒದಗಿಬರುವ ಇಂತಹ ಅವಕಾಶಗಳನ್ನು ಕಳೆದುಕೊಳ್ಳದೆ ಉತ್ತಮ ಕ್ರೀಡಾಪಟುಗಳಾಗುವುದರ ಜೊತೆಗೆ ಉತ್ತಮ ಸಂಸ್ಕಾರವುಳ್ಳ ಪ್ರಜೆಗಳಾಗಬೇಕು" ಎಂದು ತಿಳಿಸಿದರು.

ವಿಶೇಷ ಆಹ್ವಾನಿತರಾಗಿ ಕರ್ನಾಟಕ ಸರ್ಕಾರದ ಕೃಷಿ ಸಚಿವರು ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರೂ ಆದ ಶ್ರೀ ಟಿ.ಬಿ. ಜಯಚಂದ್ರ ಅವರು ಆಗಮಿಸಿದ್ದರು. "ಇದೊಂದು ಅಪರೂಪದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕ್ಷೇತ್ರ. ಇದು ನಮ್ಮ ಜಿಲ್ಲೆಯಲ್ಲಿರುವುದು ನಮ್ಮ ಪುಣ್ಯ. ಆಧುನಿಕ ಶಿಕ್ಷಣಕ್ಕೆ ಸ್ಪಂದಿಸುವಂತಹ ದೈಹಿಕ, ಮಾನಸಿಕ, ನೈತಿಕ ಶಿಕ್ಷಣವನ್ನು ನೀಡುವುದರ ಮೂಲಕ ಶ್ರೀಗಳು ಮಕ್ಕಳ ಸರ್ವತೋಮುಖ ವ್ಯಕ್ತಿತ್ವದ ವಿಕಾಸಕ್ಕೆ ನೆರವಾಗಿದ್ದಾರೆ. ಇದರ ಸದುಪಯೋಗ ಪಡೆದುಕೊಳ್ಳಬೇಕು" ಎಂದು ನುಡಿದರು.

ತುಮಕೂರು ಬಳಿಯಿರುವ ಪಂಡಿತನಹಳ್ಳಿಯ ಟಿ.ವಿ.ಎಸ್.ಇ. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಬಿ.ಎಸ್. ಬಾಡಗಂಡಿ ಅವರು ವಿಜೇತರಾದ ಕ್ರೀಡಾಪಟುಗಳಿಗೆ ಬಹುಮಾನಗಳನ್ನು ವಿತರಿಸಿದರು.

ಈ ಕ್ರೀಡಾಕೂಟದಲ್ಲಿ ೫೩ ಪ್ರೌಢಶಾಲೆಗಳು, ೬ ಹಿರಿಯ ಪ್ರಾಥಮಿಕ ಪಾಠಶಾಲೆಗಳು, ೨ ಅಂಧಮಕ್ಕಳ ಶಾಲೆಗಳು ಸೇರಿದಂತೆ ೬೧ ಶಾಲೆಗಳಿಂದ ೯೮೦ ಕ್ರೀಡಾಪಟುಗಳು ಭಾಗವಹಿಸಿದ್ದರು.

ಓಟದ ಸ್ಪರ್ಧೆ, ಉದ್ದ ಜಿಗಿತ, ಎತ್ತರ ಜಿಗಿತ, ಗುಂಡು ಎಸೆತ, ಖೋಖೋ, ಕಬಡ್ಡಿ, ವಾಲಿಬಾಲ್ ಮುಂತಾದ ಕ್ರೀಡಾಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ತುಮಕೂರಿನ ಶ್ರೀ ಸಿದ್ಧಗಂಗಾ ಜೂನಿಯರ್ ಕಾಲೇಜಿನ ವಿದ್ಯಾರ್ಥಿಗಳು ವಾಲಿಬಾಲ್‌ನಲ್ಲಿ ಪ್ರಥಮ ಸ್ಥಾನ ಪಡೆದರೆ, ಅರೆಯೂರಿನ

## ರಾಷ್ಟ್ರೀಯ ಚಿಂತನ ವಿಜ್ಞಾನ ಪರೀಕ್ಷೆ

ಚಿತ್ರದುರ್ಗದ ಚಿಂತನ ಪ್ರಕಾಶನ ಸಂಸ್ಥೆಯು ೧೯೯೯-೨೦೦೦ನೇ ಸಾಲಿನಲ್ಲಿ ರಾಷ್ಟ್ರೀಯ ಚಿಂತನ ವಿಜ್ಞಾನ ಪರೀಕ್ಷೆಯನ್ನು ನಡೆಸಿದ್ದರು. ಈ ಪರೀಕ್ಷೆಗೆ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ೭೪ ವಿದ್ಯಾರ್ಥಿಗಳು ಹಾಜರಾಗಿದ್ದರು. ಈ ವಿದ್ಯಾರ್ಥಿಗಳಲ್ಲಿ ೧೦ನೇ ತರಗತಿಯ ವಿದ್ಯಾರ್ಥಿನಿ ಎಸ್. ಸೌಮ್ಯ, ತಾಲ್ಲೂಕು ಮಟ್ಟದಲ್ಲಿ ಪ್ರಥಮ ರ್‍ಯಾಂಕ್ ಪಡೆದಿದ್ದಾರೆ. ಕುಮಾರಿ ಕೆ.ಎಸ್. ಚೈತ್ರ ಮತ್ತು ಟಿ. ರಾಮಚಂದ್ರ ರೆಡ್ಡಿ ದ್ವಿತೀಯ ರ್‍ಯಾಂಕ್ ಪಡೆದಿರುತ್ತಾರೆ.

ಈ ವಿದ್ಯಾರ್ಥಿಗಳು ಶ್ರೀಕ್ಷೇತ್ರಕ್ಕೆ ಹಾಗೂ ಶಾಲೆಗೆ ಕೀರ್ತಿಯನ್ನು ತಂದಿದ್ದಾರೆ. ವಿಜ್ಞಾನ ಶಿಕ್ಷಕರಾದ ಶ್ರೀ ಗಂಗಾಧರಯ್ಯನವರಿಗೆ ವಿದ್ಯಾರ್ಥಿಗಳನ್ನು ಉತ್ತಮವಾಗಿ ಸಂಘಟಿಸಿದ್ದಕ್ಕಾಗಿ ಉತ್ತಮ ಮಾರ್ಗದರ್ಶಿ, ಸಂಘಟನ ಶಿಕ್ಷಕರೆಂದು ಪ್ರಶಸ್ತಿ ನೀಡಿ ಸನ್ಮಾನಿಸಲಾಗಿದೆ.

**ವರದಿ : ಕೆ.ಬಿ. ಶಿವಶಂಕರಯ್ಯ**

## ರಾಜ್ಯಸ್ತರದ ಸಂಸ್ಕೃತ ಭಾಷಣ ಸ್ಪರ್ಧೆ

ದಿನಾಂಕ ೧೬.೧.೨೦೦೦ನೇ ದಿನದಂದು ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ ಜರುಗಿದ ರಾಜ್ಯಸ್ತರದ ಸಂಸ್ಕೃತ ಭಾಷಣ ಸ್ಪರ್ಧೆಯಲ್ಲಿ ಕಿರಿಯರ ವಿಭಾಗದಲ್ಲಿ ಕು|| ಕವನಾ - ಪ್ರಥಮ, ಶ್ರೀವತ್ಸಲಾ - ದ್ವಿತೀಯ, ಅಂಜನಾ ತೃತೀಯ ಸ್ಥಾನವನ್ನು, ಹಿರಿಯರ ವಿಭಾಗದಲ್ಲಿ ಕು. ವತ್ಸಲಾ ಶಾಸ್ತ್ರಿ ಪ್ರಥಮ ಸ್ಥಾನವನ್ನೂ, ಕು. ಸುಮಾ ಟಿ.ಪಿ. ತೃತೀಯ ಸ್ಥಾನವನ್ನು ಪಡೆದರು. ಆರು ಬಹುಮಾನಗಳಲ್ಲಿ ಐದು ಬಹುಮಾನಗಳು ತುಮಕೂರಿನ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಮಹಾಪಾಠಶಾಲೆಯ ಪಾಲಾಗಿರುವುದು ಅಭಿಮಾನ ಪಡುವಂತಹದು.

ಇದೇ ತಿಂಗಳು ೨೬ನೇ ತಾರೀಖಿನಂದು ಜರುಗಿದ ಶ್ರೀ ಕಾಲಭೈರವೇಶ್ವರ ಸಂಸ್ಕೃತ ಮಹಾವಿದ್ಯಾಲಯ ಆದಿಚುಂಚನಗಿರಿಯ ಆಶ್ರಯದಲ್ಲಿ ನಡೆದ ರಾಜ್ಯಸ್ತರದ ಸಂಸ್ಕೃತ ಭಾಷಣ ಸ್ಪರ್ಧೆಯಲ್ಲೂ ಇದೇ ಮಹಾವಿದ್ಯಾಲಯವು ಪ್ರಥಮ-ದ್ವಿತೀಯ ಬಹುಮಾನಗಳನ್ನು ಪಡೆದು ಪರ್ಯಾಯ ಪಾರಿತೋಷಕ ಫಲಕವನ್ನು ಪಡೆದುಕೊಂಡಿತು.

**- ವರದಿ : ಪಿ.ಎನ್. ಚಂದ್ರಶೇಖರಯ್ಯ**

ಶ್ರೀ ಸಿದ್ಧಗಂಗಾ ಪ್ರೌಢಶಾಲೆ ಖೋಖೋದಲ್ಲಿ ಪ್ರಥಮ ಸ್ಥಾನ ತನ್ನದಾಗಿಸಿಕೊಂಡಿತು.

ಹಿರಿಯ ಪ್ರಾಥಮಿಕ ಶಾಲಾ ಮಟ್ಟದಲ್ಲಿ ಶ್ರೀ ಸಿದ್ಧಗಂಗಾಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ ವಾಲಿಬಾಲ್‌ನಲ್ಲಿ ಪ್ರಥಮ ಸ್ಥಾನ ಪಡೆಯಿತು.

ಬೆಂಗಳೂರಿನ ಅಂಬಿಕಾ ಹಿರಿಯ ಪ್ರಾಥಮಿಕ ಶಾಲೆ ಖೋಖೋದಲ್ಲಿ ಪ್ರಥಮ ಸ್ಥಾನ ಪಡೆಯಿತು.

ಈ ಕ್ರೀಡಾಕೂಟದಲ್ಲಿ ಹೆಚ್ಚು ಅಂಕಗಳನ್ನು ನಾಗಸಂದ್ರದಲ್ಲಿರುವ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆಯು ಪಡೆಯಿತು. ವಿವಿಧ ಪಂದ್ಯಗಳಲ್ಲಿ ೬೫ ಜನ ಕ್ರೀಡಾಧಿಕಾರಿಗಳು ಭಾಗವಹಿಸಿದ್ದರು. ಎಲ್ಲಾ ಉಪಸಮಿತಿಯ ಸದಸ್ಯರು ಜವಾಬ್ದಾರಿಯಿಂದ ಕರ್ತವ್ಯ ನಿರ್ವಹಿಸಿದರು. ಹಲವಾರು ದಾನಿಗಳು ಕ್ರೀಡಾಕೂಟಕ್ಕೆ ಸಹಕಾರ ನೀಡಿದರು.

ಒಂದು ರೀತಿಯಲ್ಲಿ ಈ ಕ್ರೀಡಾಕೂಟ ಮಿನಿ ಸಾರ್ಕ್ ಹಾಗೂ ಒಲಂಪಿಕ್ಸ್ ಕ್ರೀಡಾಕೂಟವಿದ್ದಂತೆ ಭಾಸವಾಗುತ್ತಿತ್ತು. ಚಿಣ್ಣರ ಲೋಕದ ಜಾತ್ರೆಯೇ ನೆರೆದಿತ್ತು.

## ಸಾಹಿತ್ಯ ಮತ್ತು ಪ್ರತಿಭಾ ಸ್ಪರ್ಧೆ

೧೯೯೯-೨೦೦೦ನೇ ಸಾಲಿನ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ನಿಧಿ ವತಿಯಿಂದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ತಾಲ್ಲೂಕು ಮಟ್ಟದಲ್ಲಿ ದಿನಾಂಕ ೨೮.೧೨.೧೯೯೯ರಂದು ತುಮಕೂರಿನ ಆರ್ಯ ಪ್ರೌಢಶಾಲಾ ಆವರಣದಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಭಾ ಸ್ಪರ್ಧೆಯನ್ನು ತುಮಕೂರು ಸಾರ್ವಜನಿಕ ಶಿಕ್ಷಣ ಇಲಾಖೆ ಏರ್ಪಡಿಸಿತ್ತು.

ಈ ಸ್ಪರ್ಧೆಯಲ್ಲಿ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ಹತ್ತನೇ ತರಗತಿಯ ಸಂದೀಪ ಜಿ.ಸಿ. ಎಂಬ ವಿದ್ಯಾರ್ಥಿ ವಿಜ್ಞಾನದ ವಸ್ತುಗಳನ್ನು ತಯಾರಿಸುವ ಸ್ಪರ್ಧೆಯಲ್ಲಿ ಭಾಗವಹಿಸಿ 'ಡ್ಯಾನ್ಸಿಂಗ್ ಹಾಲ್' ಎಂಬ ಮಾದರಿ ತಯಾರಿಸಿ, ಪ್ರಥಮ ಸ್ಥಾನ ಪಡೆದು ಬಹುಮಾನ ಪಡೆದಿದ್ದಾನೆ. ಅಲ್ಲದೆ ಜಿಲ್ಲಾಮಟ್ಟದ ಸ್ಪರ್ಧೆಗೆ ಆಯ್ಕೆಯಾಗಲು ಅರ್ಹನಾಗಿದ್ದಾನೆ.

ಈ ಸ್ಥಳದಲ್ಲಿ ಇದೇ ಶಾಲೆಯ ೧೦ನೇ ತರಗತಿ ವಿದ್ಯಾರ್ಥಿನಿ ಎಸ್. ಸೌಮ್ಯ ಚರ್ಚಾಸ್ಪರ್ಧೆಯಲ್ಲಿ ಭಾಗವಹಿಸಿ ದ್ವಿತೀಯ ಸ್ಥಾನವನ್ನು ಪಡೆದು ಶಾಲೆಗೆ ಕೀರ್ತಿ ತಂದಿದ್ದಾರೆ.





## ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಗುದ್ದಲಿ ಪೂಜೆ



ಜನವರಿ ೧೫ ರಂದು ಪರಮಪೂಜ್ಯ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಗುದ್ದಲಿ ಪೂಜೆ ಸಮಾರಂಭ ನಡೆಯಿತು. ಈ ಸಂದರ್ಭದಲ್ಲಿ ಕಿರಿಯ ಶ್ರೀ ಶ್ರೀಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಕ್ಷೇತ್ರದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಕಾರ್ಯದರ್ಶಿ ಪ್ರೊ. ಬಿ. ಗಂಗಾಧರಯ್ಯ, ಸಹ ಕಾರ್ಯದರ್ಶಿಗಳಾದ ಶ್ರೀ ಕೆ. ವೀರಭದ್ರಯ್ಯ, ಶ್ರೀ ಎಸ್. ಶಿವಕುಮಾರ್ ಹಾಗೂ ಕಾರ್ಯಕಾರಿ ಸಮಿತಿ, ಹಾಗೂ ಉಪ ಸಮಿತಿಯ ಸದಸ್ಯರುಗಳು ಉಪಸ್ಥಿತರಿದ್ದರು.



## ಗುಡೇಮಾರನಹಳ್ಳಿ - ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜಿನಲ್ಲಿ

# ಗ್ರಾಮಾಂತರ ವಿಜ್ಞಾನ ವಸ್ತುಪ್ರದರ್ಶನ

ಮಾಗಡಿ ತಾಲ್ಲೂಕು ಗುಡೇಮಾರನಹಳ್ಳಿಯಲ್ಲಿನ ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜಿನಲ್ಲಿ ದಿನಾಂಕ ೨೨.೧೨.೯೯ ರಿಂದ ಮೂರು ದಿನಗಳ ಕಾಲ ನಡೆದ



ವಸ್ತು ಪ್ರದರ್ಶನವನ್ನು ಆಸಕ್ತಿಯಿಂದ ವೀಕ್ಷಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳು

ಗ್ರಾಮಾಂತರ ವಿಜ್ಞಾನ ವಸ್ತು ಪ್ರದರ್ಶನದ ಸ್ಪರ್ಧೆಯಲ್ಲಿ ಶ್ರೀ ಸಿದ್ಧಗಂಗಾಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ವಿದ್ಯಾರ್ಥಿಗಳು ಭಾಗವಹಿಸಿ ಪರಿಸರ ಮಾಲಿನ್ಯ, ಜಲಮಾರ್ಗದಲ್ಲಿ ಲಾಕ್ಸ್ ಪದ್ಧತಿ ಮತ್ತು ದೃಷ್ಟಿದೋಷಕ್ಕೆ



ವಿಜೇತರಿಗೆ ಬಹುಮಾನ ವಿತರಣೆ

ಸಂಬಂಧಿಸಿದ ಕಾಯಿಲ್ ಮಾದರಿಗಳನ್ನು ತಯಾರಿಸಿ ಪ್ರದರ್ಶಿಸಿದರು. ಮಾಗಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಬಹುಮಾನ ವಿತರಿಸಿದರು. ಈ ಶಾಲೆಯಿಂದ ಮಾರ್ಗದರ್ಶಿ ಶಿಕ್ಷಕರಾಗಿ ಭಾಗವಹಿಸಿದ್ದ ಶ್ರೀ ಗಂಗಾಧರಯ್ಯ ನವರು ಉತ್ತಮ ಮಾರ್ಗದರ್ಶಿ ಶಿಕ್ಷಕರೆಂದು ಪ್ರಶಸ್ತಿ ಪಡೆದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಪ್ರದರ್ಶನದಲ್ಲಿ ಭಾಗವಹಿಸಿ, ಮಕ್ಕಳ ಕಾರ್ಯ-ಕೌಶಲ್ಯವನ್ನು ಮೆಚ್ಚಿ ಸಂತಸ ವ್ಯಕ್ತಪಡಿಸಿದರು.

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ,
ಎನ್ನ ಹೊಗಳತೆ ಎನ್ನನಿಮ್ಮಯ್ಯೊಂಡಿತ್ತಿಲ್ಲಾ
ಅಯ್ಯಾ, ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲಾ
ಅಯ್ಯೋ, ನೊಂದೆನು, ಸೈರಿಸಲಾರೆನು
ಕೂಡಲ ಸಂಗಮದೇವಾ, ನೀನೆನಗೊಳ್ಳಿದನಾದರೆ
ಎನ್ನ ಹೊಗಳತೆಗಡ್ಡ ಬಾರಾ, ಧರ್ಮಿ.

* * * *

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ
"ಇವ ನಮ್ಮವ, ಇವ ನಮ್ಮವ, ಇವ ನಮ್ಮವ"ನೆಂದೆನಿಸಯ್ಯಾ
ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆನಿಸಯ್ಯಾ.

- ಬಸವಣ್ಣ

ಹುಟ್ಟುವುದೇ ಬಂಧ, ಸಾವುದೇ ಮೋಕ್ಷ ಎಂಬ
ಅರೆ ಮರುಳುಗಳನೇನೆಂಬೆನಯ್ಯ
ಸಾವ ಹುಟ್ಟುವ ಬಂಧದಲ್ಲಿ ಮೋಕಷವುಂಟೇ?
ಸಂಚಿತ ಪ್ರಾರಬ್ಧ ಆಗಾಮಿ ಸವೆದು
ಅಷ್ಟಭೋಗಂಗಳು ತೀರಿ ಹುಟ್ಟು ಹೊಂದು ಬಿಟ್ಟುದೇ ಮೋಕ್ಷ
ಅಂತಪ್ಪ ಮೋಕ್ಷ ಸಿದ್ಧಿಯಪ್ಪಡೆ
ಸೌರಾಷ್ಟ್ರ ಸೋಮೇಶ್ವರ ಲಿಂಗವ ಕೈವಿಡಿದಲ್ಲದಾಗದು

- ಆದಯ್ಯ





## ಪರಮಪೂಜ್ಯ ಡಾ. ಶ್ರೀ ಸ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 184. | **ಶ್ರೀ ಬಿ.ಎಲ್. ಸಿದ್ದಯ್ಯ**<br>ನಿವೃತ್ತ ಉಪನ್ಯಾಸಕರು,<br>ಅಶೋಕನಗರ, ತುಮಕೂರುರು-2. | 1,101-00 |
| 185. | **ಶ್ರೀ ಸಿದ್ಧಗಂಗಪ್ಪ**<br>ಮುಖ್ಯೋಪಾಧ್ಯಾಯರು,<br>ಹಿರಿಯ ಪ್ರಾಥಮಿಕ ಸಾಲೆ,<br>ಸಾಕ್ಷಿಪಳ್ಳಿ, ಶಿರಾ ತಾಲ್ಲೂಕು,<br>ತುಮಕೂರು ಜಿಲ್ಲೆ. | 1,101-00 |
| 186. | **ಶ್ರೀ ಹೆಚ್. ಚಂದ್ರಶೇಖರ್,**<br>ವಿನಯ್ ಟ್ರಾಕ್ಟರ್ ಎಂಟರ್‌ಪ್ರೈಸಸ್,<br>ಕೆ.ಹೆಚ್. ರೋಡ್,<br>ಬೆಂಗಳೂರು-560 027 | 1,101-00 |
| 187. | **ಶ್ರೀ ಶಿವಾನಂದ ಶರ್ಮ,**<br>ನಂ. 3390/ಎ,<br>2ನೇ ಕ್ರಾಸ್, ವಿಜಯನಗರ 2ನೇ ಹಂತ,<br>ಬೆಂಗಳೂರು-560040 | 1,101-00 |
| 188. | **ಶ್ರೀ ಪಾಲಾಕ್ಷಯ್ಯ,**<br>ಅಭಿಯಂತರರು,<br>ಇಮಚೇನಹಳ್ಳಿ, ನರಸೀಪುರ ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | 1,101-00 |
| 189. | **ಶ್ರೀ ಎನ್.ಆರ್. ಜಗದೀಶ್,**<br>ತಂದೆ ಎನ್.ಸಿ. ರಾಜಪ್ಪ,<br>ನಂ. 1969, 6ನೇ ಕ್ರಾಸ್,<br>ಸುಭಾಷ್ ನಗರ,<br>ನೆಲಮಂಗಲ-562123<br>ಬೆಂಗಳೂರು (ಗ್ರಾ) ಜಿಲ್ಲೆ. | 1,101-00 |
| 190. | **ಶ್ರೀ ಬಸವರಾಜಪ್ಪ**<br>ತಂದೆ ಸಿದ್ಧಲಿಂಗಪ್ಪ,<br>ಲಕ್ಷ್ಮೀಪುರ, ದಾಸನಪುರ ಹೋಬಳಿ, ,<br>ಬೆಂಗಳೂರು ದಕ್ಷಿಣ ತಾಲ್ಲೂಕು. | 1,101-00 |
| 191. | **ಶ್ರೀ ಬಿ. ಸಿದ್ಧಲಿಂಗಪ್ಪ,**<br>ಪುರ ಮತ್ತು ಅಂಚೆ,<br>ನಿಟ್ಟೂರು ಹೋಬಳಿ,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | 1,101-00 |
| 192. | **ಶ್ರೀಮತಿ ಗೌರಮ್ಮ**<br>ಆಚಾರ್ಯ ಬೀದಿ, ಮಧುಗಿರಿ<br>ತುಮಕೂರು ಜಿಲ್ಲೆ. | 1,101-00 |
| 193. | **ಶ್ರೀ ಎಂ. ನಂಜುಂಡಪ್ಪ,**<br>10/1, 4ನೇ 'ಎ' ಕ್ರಾಸ್,<br>ವಿಜಯನಗರ,<br>ಬೆಂಗಳೂರು-560 040 | 1,101-00 |
| 194. | **ಶ್ರೀ ಕೆಂಪೇಗೌಡ,**<br>ಹಿರೇಹಳ್ಳಿ ಮತ್ತು ಅಂಚೆ,<br>ತುಮಕೂರು ತಾಲ್ಲೂಕು,<br>ತುಮಕೂರು ಜಿಲ್ಲೆ. | 1,101-00 |
| 195. | **ಶ್ರೀ ಕೆ.ಎನ್. ತಿಮ್ಮಯ್ಯ,**<br>ರಸಾಯನಶಾಸ್ತ್ರ ವಿಭಾಗ,<br>ಮೈಸೂರು ವಿಶ್ವವಿದ್ಯಾನಿಲಯ,<br>ಮಾನಸ ಗಂಗೋತ್ರಿ,<br>ಮೈಸೂರು-570006 | 1,101-00 |
| 196. | **ಶ್ರೀ ಎಸ್. ಶಿವಲಿಂಗಯ್ಯ,**<br>"ಗಂಗಾಧರೇಶ್ವರ ನಿಲಯ",<br>ನಂ. 14, ಕೆನಡಿ ಗೆಸ್ಟ್ ಹೌಸ್,<br>ಬಟವಾಡೆ ಎದುರು,<br>ತುಮಕೂರು ಜಿಲ್ಲೆ-572103 | 1,101-00 |
| 197. | **ಶ್ರೀ ಪ್ರಭು**<br>ತಂದೆ ಮಲಿಗಪ್ಪಾಚಾರ್,<br>'ಅರುಣ ನಿಲಯ', ನಂ. 14,<br>ಯಲಹಂಕ ಬೀದಿ, ದೇವನಹಳ್ಳಿ ಟೌನ್,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1,101-00 |
| 198. | **ಶ್ರೀ ಜೆ.ಸಿ. ಮರಿಗೌಡ,**<br>ಆರ್-777-15979,<br>ಬಿ.ಇ.ಎಂ.ಎಲ್. ರೈಲ್ವೆ ಕೋಚ್ ಡಿವಿಜನ್,<br>ತಿಪ್ಪಸಂದ್ರ ಅಂಚೆ,<br>ಬೆಂಗಳೂರು-560 075 | 1,101-00 |
| 199. | **ಶ್ರೀ ನೀಲಕಂಠಯ್ಯ,**<br>ನಿವೃತ್ತ ಶಿಕ್ಷಕರು,<br>ಅರಳಗುಪ್ಪೆ ಮತ್ತು ಅಂಚೆ,<br>ತಿಪಟೂರು ತಾಲ್ಲೂಕು,<br>ತುಮಕೂರು ಜಿಲ್ಲೆ | 1,101-00 |

(ಮುಂದುವರಿಯುತ್ತದೆ)

## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 159. | ಶ್ರೀ ಹೆಚ್.ಆರ್. ಮುರುಗೇಂದ್ರ ಮತ್ತು ಮಕ್ಕಳು, ಕಾಫಿ ಬೆಳೆಗಾರರು, ಗ್ರೀನ್ ಲ್ಯಾಂಡ್ ಎಸ್ಟೇಟ್, ಹಲಸುಲಿಗೆ ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | 1,101-00 |
| 160. | ಶ್ರೀ ಎನ್. ಮುದ್ದಪ್ಪ ಮತ್ತು ಶ್ರೀಮತಿ ಲೀಲಾವತಿ (ಮಗಳು), ನಂ. 20/ಸಿ, 4ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು-560 010. | 1,101-00 |
| 161. | ಶ್ರೀಮತಿ ಜಯಶ್ರೀ ನಾಗರಾಜು, ನಂ. 75, 4ನೇ ಹಂತ, ಬಿಇಎಂಎಲ್ ಲೇ-ಔಟ್, ರಾಜರಾಜೇಶ್ವರಿ ನಗರ, ಬೆಂಗಳೂರು-560 039 | 5,001-00 |
| 162. | ಶ್ರೀಮತಿ ಲಕ್ಷ್ಮೀದೇವಮ್ಮ ಮಾಣಿಕ್ಯಾಚಾರ್, ನಂ. 15/4, ಜೀವನಹಳ್ಳಿ ಮುಖ್ಯರಸ್ತೆ, ಆಚಾರಪ್ಪ ಗಾರ್ಡನ್, ಕಾಕ್ಸ್ ಟೌನ್, ಬೆಂಗಳೂರು-560 005. | 1,101-00 |
| 163. | ಶ್ರೀ ಕುಮಾರಸ್ವಾಮಿ, ತಂದೆ ಜೀರ್ಗಾಚಾರ್, 1ನೇ ಕ್ರಾಸ್, ಶಿವಾನಂದನಗರ, ನಂ. 120, ಮೂಡಲಪಾಳ್ಯ, ಬೆಂಗಳೂರು-560 072 | 2,000-00 |
| 164. | ಶ್ರೀ ಶಾಂತಸೋಮಲಿಂಗಯ್ಯ, ನಂ. 22, 'ಸೋಮೇಶ್ವರ ನಿಲಯ', ಸಾರಕ್ಕಿ ಗೇಟ್, ಕನಕಪುರ ರಸ್ತೆ, ಬೆಂಗಳೂರು-560078 | 1,001-00 |
| 165. | ಶ್ರೀ ಎಂ.ಆರ್. ತಿಮ್ಮಯ್ಯ, ತಂದೆ ದಿವಂಗತ ಜಿ.ಬಿ. ರಂಗಯ್ಯ, ಐಯ್ಯನಪಾಳ್ಯ, ಮೈದಾಳ ಅಂಚೆ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ. | 1,001-00 |
| 166. | ಶ್ರೀ ಬಿ. ಪಂಚಾಕ್ಷರಯ್ಯ, ಶಿಕ್ಷಕರು, ತಗಲೂರು, ಓಬಳಾಪುರ ಅಂಚೆ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ. | 1,101-00 |
| 167. | ಶ್ರೀ ಬಿ. ಆಡವೀಶಯ್ಯ, ತಂದೆ ವೀರಣ್ಣ, (ಓಜೇನಹಳ್ಳಿ) ಎಸ್.ಎಸ್. ಪುರಂ, 8ನೇ ಕ್ರಾಸ್, ಮನೆ ನಂ. 30, ತುಮಕೂರು. | 1,101-00 |
| 168. | ಶ್ರೀ ಬಿ.ಕೆ. ಲಿಂಗಯ್ಯ ಮತ್ತು ಶ್ರೀಮತಿ ಶಾರದಮ್ಮ, ಸುಭಾಷ್ ನಗರ, ನೆಲಮಂಗಲ-562123 ಬೆಂಗಳೂರು (ಗ್ರಾ) ಜಿಲ್ಲೆ. | 1,101-00 |
| 169. | ಶ್ರೀಮತಿ ಮತ್ತು ಶ್ರೀ ಕೆ.ಪಿ. ನಾರಾಯಣ್, ನಿವೃತ್ತ ಜಿಲ್ಲಾಧಿಕಾರಿಗಳು, ನಂ. 12/18, ಉದಾನಿ ಲೇ-ಔಟ್, ಅಲಸೂರು, ಬೆಂಗಳೂರು-560 008 | 2,500-00 |
| 170. | ಶ್ರೀ ಬಿ. ಚಂದ್ರಕಾಂತ್, ನಂ. 52, 10ನೇ ಮೇನ್, 17ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-560 055. | 1,101-00 |
| 171. | ಶ್ರೀ ಡಿ.ಎಸ್. ಪಶುಪತಿ ಮತ್ತು ಶ್ರೀ ಎಸ್. ಪ್ರಶಾಂತ್, ನಂ. 19, ಪಾರ್ಕ್ ರಸ್ತೆ, ಬೆಂಗಳೂರು-560 053 | 1,101-00 |
| 172. | ಶ್ರೀ ಆರ್. ಗಂಗಾಧರಶರ್ಮ, ನಿವೃತ್ತ ಶಿಕ್ಷಕರು, ಕಡಬಗೆರೆ, ಮಾರ್ಗ ತಾವರೆಕೆರೆ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | 1,108-00 |
| 173. | ಶ್ರೀ ಕೆ.ಎಲ್. ಸಿದ್ದಲಿಂಗಯ್ಯ, ನಂ. 175, 7ನೇ 'ಬಿ' ಮೇನ್, ಆರ್.ಪಿ.ಸಿ. ಲೇ-ಔಟ್, ವಿಜಯನಗರ ಎರಡನೇ ಹಂತ, ಬೆಂಗಳೂರು-560 040 | 1,101-00 |
| 174. | ಶ್ರೀ ಎಸ್.ಸಿ. ಬೀರಯ್ಯ, ಉದ್ಯಾನನಗರ, ಟಿನ್ ಫ್ಯಾಕ್ಟರಿ ಹಿಂಭಾಗ, ಗಣೇಶ ದೇವಸ್ಥಾನದ ಹತ್ತಿರ, ಬೆಂಗಳೂರು-560 016 | 1,101-00 |
| 175. | ಶ್ರೀ ಪಾಲಾಕ್ಷಯ್ಯ, ಅಭಿಯಂತರರು, ಇಮಚೇನಹಳ್ಳಿ, ನರಸೀಪುರ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | 5,001-00 |

(ಮುಂದುವರಿಯುತ್ತದೆ)




ಜನವರಿ ೧೫ರಂದು ಶ್ರೀಕ್ಷೇತ್ರದಲ್ಲಿ ನಡೆದ ಶ್ರೀ ಉದ್ದಾನ ಶಿವಯೋಗಿಗಳವರ ೫೯ನೇ ಪುಣ್ಯಾರಾಧನೆ ಸಮಾರಂಭದ ಸಾನಿಧ್ಯ ವಹಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು.

ಶ್ರೀಕ್ಷೇತ್ರದಲ್ಲಿ ಇತ್ತೀಚೆಗೆ ನಡೆದ ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆ ಸಮಾರಂಭದಲ್ಲಿ ಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ ರಾಜ್ಯ ಸಣ್ಣ ಕೈಗಾರಿಕಾ ಸಚಿವ ಶ್ರೀ ಎಸ್.ಆರ್. ಕಾಶಪ್ಪನವರ್ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಎನ್. ಬಸವಾರಾಧ್ಯ ಅವರನ್ನು ಕಾಣಬಹುದು.